**ಸರ್ಕಾರದ ಆದೇಶ ಸಂಖ್ಯೆ : ಇಎನ್ 119 ಎನ್‌ಸಿಇ 2011, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2012**

M/s Mytrah Energy (India) Limited ಕಂಪನಿಗೆ ಬೆಳಗಾವಿ ಜಿಲ್ಲೆಯ ತೋಟ್‌ಗಟ್ಟಿ ಮತ್ತು ಕೆಸರ್‌ಗೊಪ್ ಗ್ರಾಮಗಳಲ್ಲಿ 10.00 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Sl. No. | Topo Sheet No. | Proposed capacity in MW | Nearby villages of the proposed area and district | Geographical area description of the project |
|---|---|---|---|---|
| 1 | 47 P/4 | 10 MW (20 Nos x 500 KW) | Totgatti and Kesargop villages of Belgaum District | The proposed area is located on the south of Kasaba Chandargi town and Kesargop village. It is a large plateau mostly as agricultural activities and gently elevation varies from 640 mt to 680 mt.<br>The proposed area is covered in the following Geographical coordinates :<br>Latitude : $16^{0}0'0"$ – $16^{0}13'4"$N<br>Longitude : $75^{0}$ 5''46" – $75^{0}$' 10'0" E<br>Ridge peaks : 673, 648, 634 Amsl. |
| | | **10.00 MW** | | |

1. ಈ ಯೋಜನೆಯನ್ನು 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್ ಸಿಇ 06–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್) ಗಳ ಸಂಖ್ಯೆ |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
8. ಸರ್ಕಾರಿ ಆದೇಶ ಸಂ:ಇಎನ್ 95 ಇಬಿಎಸ್ 2009 ದಿ: 29–12–2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.854

**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

ವಿಷಯ : 2011-12ನೇ ಸಾಲಿನಲ್ಲಿ ಒಟ್ಟು 78,525 ಪೊಲೀಸ್ ಸಿಬ್ಬಂದಿಗಳಿಗೆ ವಿಶೇಷ ಗುಂಪು ವಿಮಾ ವಾರ್ಷಿಕ ಪ್ರೀಮಿಯಂ ಮೊತ್ತವನ್ನು ವಿಮಾ ಕಂಪನಿಗೆ ಪಾವತಿಸುವ ಕುರಿತು.

ಓದಲಾಗಿದೆ : 1) ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 218 ಪಿಓಪಿ 2011 ದಿನಾಂಕ : 30-09-2011.
2) ಪತ್ರದ ಸಂಖ್ಯೆ : ಹೆಚ್‌ಡಿ 103 ಪಿಓಪಿ 2011 ದಿನಾಂಕ : 02-01-2012.
3) ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 53 ಪಿಓಪಿ 2012 ದಿನಾಂಕ : 21-02-2012.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರುರವರ ಪತ್ರದ ಸಂಖ್ಯೆ : ವಿವೇಶಾ [4]/1/2011 ದಿನಾಂಕ : 31-01-2012 ಮತ್ತು 09-03-2012.

**ಪ್ರಸ್ತಾವನೆ :**

ಮೇಲೆ [1] ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಕಾನ್‌ಸ್ಟೇಬಲ್, ಪೊಲೀಸ್ ಹೆಡ್ ಕಾನ್‌ಸ್ಟೇಬಲ್ ಮತ್ತು ಅನುಯಾಯಿಗಳು ಸೇರಿದಂತೆ ಒಟ್ಟು 78525 ಸಿಬ್ಬಂದಿಗಳಿಗೆ ವಿಶೇಷ ಗುಂಪುಯೋಜನೆ ವಾರ್ಷಿಕ ಮೊತ್ತ ಹಾಗೂ ಸೇವಾ ತೆರಿಗೆ ಸೇರಿ ಒಟ್ಟು ರೂ. 75,35,338/- ಗಳನ್ನು ಮೆ॥ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ ನಿಯಮಿತ, ಬೆಂಗಳೂರು ಇವರಿಗೆ ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ [2] ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಕಾನ್‌ಸ್ಟೇಬಲ್, ಪೊಲೀಸ್ ಹೆಡ್ ಕಾನ್‌ಸ್ಟೇಬಲ್ ಮತ್ತು ಅನುಯಾಯಿಗಳು ಸೇರಿದಂತೆ ಒಟ್ಟು 78525 ಸಿಬ್ಬಂದಿಗಳಿಗೆ ವಿಶೇಷ ಗುಂಪು ವಿಮಾ ಹಣವನ್ನು ರೂ. 3.00 ಲಕ್ಷದಿಂದ ರೂ. 10.00 ಲಕ್ಷದವರೆಗೆ ಹೆಚ್ಚಿಸಲು ಸರ್ಕಾರದ ಒಪ್ಪಿಗೆ ನೀಡಿರುತ್ತದೆ.

ಮೇಲೆ [3]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಶೇಷ ಗುಂಪು ವಿಮಾ ಮೊತ್ತವನ್ನು ರೂ. 3.00 ಲಕ್ಷಗಳಿಂದ ರೂ. 10.00 ಲಕ್ಷಗಳಿಗೆ ಹೆಚ್ಚಿಸುವ ಸಂಬಂಧ ತಗಲುವ ವೆಚ್ಚ ರೂ. 40.65 ಲಕ್ಷಗಳನ್ನು ಭರಿಸಲು ಮರು ಹೊಂದಾಣಿಕೆ ಮೂಲಕ ಧನ ಪುನರ್ ವಿನಿಯೋಗಿಸಿಕೊಳ್ಳಲು ಮಂಜೂರಾತಿ ನೀಡಿರುತ್ತದೆ.

ಮೇಲೆ ಓದಲಾದ [4] ಪತ್ರಗಳಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಈಗಾಗಲೇ ಅತಿ ಕಡಿಮೆ ದರ ನೀಡಿರುವ ಮೆ॥ ಯುನೈಟೆಡ್ ಇಂಡಿಯ ಇನ್ಶೂರೆನ್ಸ್ ಕಂಪನಿ, ಬೆಂಗಳೂರು ಇವರಲ್ಲಿ ರೂ 3.00 ಲಕ್ಷಗಳ ವಿಮಾ ಮೊತ್ತಕ್ಕೆ ವಿಮಾ ಪ್ರೀಮಿಯಂ ಪಾವತಿಸಿದ್ದು ಇದು ದಿನಾಂಕ : 07-01-2011 ರಿಂದ ದಿನಾಂಕ : 06-10-2012 ರವರೆಗೆ ಚಾಲ್ತಿಯಲ್ಲಿದ್ದು ಈ ಸಂಬಂಧವಾಗಿ ಸದರಿ ವಿಮಾ ಕಂಪನಿಯವರಿಂದ ವಿಮಾ ಕರಾರು ಒಪ್ಪಂದ ಮಾಡಲಾಗಿರುತ್ತದೆ. ಆದ್ದರಿಂದ ಅತಿ ಕಡಿಮೆ ದರ ನೀಡಿರುವ ಮೆ॥ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ, ಬೆಂಗಳೂರು ರವರು ಈಗ ವಿಮಾ ಪ್ರೀಮಿಯಂ ಅನ್ನು ನೀಡಿ ದಿನಾಂಕ : 07-10-2011 ರಿಂದ 11-03-2012 ರವರೆಗೆ ಒಟ್ಟು 158 ದಿನಗಳು ಕಳೆದಿದ್ದು ಬಾಕಿ ಉಳಿದಿರುವ ಒಟ್ಟು 208 ದಿನಗಳಿಗೆ ಹೆಚ್ಚುವರಿಯಾಗಿ ರೂ. 7.00 ಲಕ್ಷಗಳಿಗೆ ವಿಮಾ ಪ್ರೀಮಿಯಂ ಅನ್ನು ಪಡೆಯಲು ತಗಲುವ ಮೊತ್ತದ ವಿವರ ನೀಡಿದ್ದು ಅದರಂತೆ ಈಗ ನೀಡುತ್ತಿರುವ ವಿಶೇಷ ಗುಂಪು ವಿಮಾ ಮೊತ್ತ ರೂ. 3.00 ಲಕ್ಷಗಳ ಜೊತೆಗೆ ಹೆಚ್ಚುವರಿಯಾಗಿ ರೂ. 7.00 ಲಕ್ಷಗಳನ್ನು ಬಾಕಿ ಉಳಿದಿರುವ ದಿನಗಳಿಗೆ ಹೆಚ್ಚಿಸಲು ವಿಶೇಷ ಗುಂಪು ವಿಮಾ ವಾರ್ಷಿಕ ಮೊತ್ತ ರೂ. 91,46,592/- ಮತ್ತು ಸೇವಾ ತೆರಿಗೆ ರೂ. 9,42,099/- ಸೇರಿ ಒಟ್ಟು ರೂ. 1,00,88,691/- ತಗಲುತ್ತದೆಯೆಂದು ತಿಳಿಸಿ ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ "2055-00-800-0-01-059 ಇತರೆ ಖರ್ಚುಗಳ ಅಡಿ ಲಭ್ಯವಿರುವ ಅನುದಾನ ಮತ್ತು ಉಳಿಕೆ ಹಣವನ್ನು ಮರುಹೊಂದಾಣಿಕೆ ಮೂಲಕ ಭರಿಸಿ ಸದರಿ ವಿಮಾ ಕಂಪನಿಗೆ ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಮೆ॥ ಯುನೈಟೆಡ್ ಇಂಡಿಯ ಇನ್ಶೂರೆನ್ಸ್ ಕಂಪನಿ, ಬೆಂಗಳೂರು ಇವರಿಂದ ಪೊಲೀಸ್ ಕಾನ್‌ಸ್ಟೇಬಲ್, ಪೊಲೀಸ್ ಹೆಡ್ ಕಾನ್‌ಸ್ಟೇಬಲ್ ಮತ್ತು ಅನುಯಾಯಿಗಳು ಸೇರಿದಂತೆ ಒಟ್ಟು 78525 ಸಿಬ್ಬಂದಿಗಳಿಗೆ ಹೆಚ್ಚುವರಿಯಾಗಿ ರೂ. 7.00 ಲಕ್ಷಗಳಿಗೆ ವಿಮಾ ಪ್ರೀಮಿಯಂ ಅನ್ನು ದಿನಾಂಕ : 12-03-2012 ರಿಂದ 06-10-2012 ವರೆಗೆ ಪಾವತಿಸುವ ಕುರಿತು ಪ್ರೀಮಿಯಂ ಇನ್‌ವಾಯ್ಸ್ ಪಡೆದಿದ್ದು ಅದರ ಪ್ರಕಾರ ವಿಶೇಷ ಗುಂಪು ವಿಮಾ ಮೊತ್ತ ರೂ. 91,46,592/- ಹಾಗೂ ಸೇವಾ ತೆರಿಗೆ ರೂ. 9,42,099/- ಸೇರಿ ಒಟ್ಟು ರೂ. 1,00,88,691/- ತಗಲುತ್ತದೆಯೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 103 ಪಿಓಪಿ 2011, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಕಾನ್ಸ್‌ಟೇಬಲ್, ಪೊಲೀಸ್ ಹೆಡ್ ಕಾನ್ಸ್‌ಟೇಬಲ್ ಮತ್ತು ಅನುಯಾಯಿಗಳು ಸೇರಿದಂತೆ ಒಟ್ಟು 78525 ಸಿಬ್ಬಂದಿಗಳಿಗೆ ಕರ್ತವ್ಯದ ಮೇಲಿದ್ದಾಗ ಮೃತಪಟ್ಟಲ್ಲಿ ಮೃತರ ಕುಟುಂಬದವರಿಗೆ ವಿಮಾ ಪರಿಹಾರ ಮೊತ್ತ ರೂ. 3,00,000/– ಗಳ ಜೊತೆಗೆ ಹೆಚ್ಚುವರಿಯಾಗಿ ರೂ. 7.00 ಲಕ್ಷಗಳನ್ನು ಬಾಕಿ ಉಳಿದಿರುವ ದಿನಗಳಿಗೆ ಹೆಚ್ಚಿಸಲು ವಿಶೇಷ ಗುಂಪು ವಿಮಾ ವಾರ್ಷಿಕ ಮೊತ್ತ ಸೇವಾ ತೆರಿಗೆ ಸೇರಿ ರೂ. 1,00,88,691 ಗಳನ್ನು [ರೂಪಾಯಿಗಳು ಒಂದು ಕೋಟಿ ಎಂಬತ್ತೆಂಟು ಸಾವಿರದ ಆರು ನೂರ ತೊಂಬತ್ತೊಂದು ಮಾತ್ರ] ಮೆ॥ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ, ನಿಯಮಿತ ಬೆಂಗಳೂರುರವರಿಗೆ ಟೆಂಡರ್‌ನ ಎಲ್ಲಾ ವಿಧಿ ವಿಧಾನಗಳನ್ನು ಚಾಚೂ ತಪ್ಪದೆ ಪಾಲಿಸುವ ಷರತ್ತಿಗೆ ಒಳಪಟ್ಟು ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–800–0–01–059 ಇತರೆ ಖರ್ಚುಗಳಡಿಯಲ್ಲಿ ಒದಗಿಸಿದ ಅನುದಾನದಿಂದ ಭರಿಸತಕ್ಕದು ಹಾಗೂ ಮೇಲೆ [3]ರಲ್ಲಿ ಓದಲಾದ ಸರ್ಕಾರದ ಆದೇಶದ ಪೊಲೀಸ್ ಕಾನ್ಸ್‌ಟೇಬಲ್, ಪೊಲೀಸ್ ಹೆಡ್ ಕಾನ್ಸ್‌ಟೇಬಲ್ ಮತ್ತು ಅನುಯಾಯಿಗಳು ಸೇರಿದಂತೆ ಒಟ್ಟು 78525 ಸಿಬ್ಬಂದಿಗಳಿಗೆ ಮರು ಹೊಂದಾಣಿಕೆ ಮೂಲಕ ಧನ ಪುನರ್ ವಿಯೋಗಿಸಿಕೊಳ್ಳಲು ಮಂಜೂರಾತಿ ನೀಡಿರುವ ಅನುದಾನದಿಂದ ಉಳಿಕೆ ಹಣವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 51 ವೆಚ್ಚ 11/2012 ದಿನಾಂಕ : 07–03–2012 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಜಮ್ಮ**

ಪಿ.ಆರ್.855

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

ವಿಷಯ : ಶ್ರೀ ಡಿ. ನಾಗರಾಜಯ್ಯ, ನಿವೃತ್ತ ಪಿ.ಎಸ್.ಐ. ಎಲೆಕ್ಟ್ರಾನಿಕ್ ಸಿಟಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

ಓದಲಾಗಿದೆ :
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 18/ಡಿಇ–1/ಆರ್. 6/2010 ದಿನಾಂಕ : 17–3–11.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು (4)/04/2011–12 (ಓ.ಬಿ. ಸಂಖ್ಯೆ : 14/2011–12) ದಿನಾಂಕ : 18–8–2011.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 07–10–2011.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರದ ಸಂಖ್ಯೆ : ಅಪೀಲು (2)/48/2011–12 ದಿನಾಂಕ : 14–12–2011

**ಪ್ರಸ್ತಾವನೆ :**

ಶ್ರೀ ಡಿ. ನಾಗರಾಜಯ್ಯ ಇವರು ಬೆಂಗಳೂರಿನ ಸೆಂಟ್ರಲ್ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್‌ಸ್ಪೆಕ್ಟರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಕರ್ತವ್ಯಲೋಪದ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಶ್ರೀ ಡಿ. ನಾಗರಾಜಯ್ಯ, ಪಿ.ಎಸ್.ಐ. ಆದ ನೀವು ದಿನಾಂಕ : 24–08–2006 ರಂದು ಸೆಂಟ್ರಲ್ ಪೊಲೀಸ್ ಠಾಣೆಗೆ ವರ್ಗಾವಣೆ ಮೇರೆಗೆ ಪ್ರಭಾರ ವಹಿಸಿಕೊಂಡು, ದಿನಾಂಕ : 26–09–2006 ರಂದು ನೀವು ಶ್ರೀ ಶಿವಶಂಕರ್ ನಾಯಕ್ ಎಂಬುವರಿಂದ ಠಾಣೆಯ ಕಾನೂನು ಮತ್ತು ಸುವ್ಯವಸ್ಥೆ ವಿಭಾಗಕ್ಕೆ ಸಂಬಂಧಿಸಿದ ಪ್ರಕರಣಗಳ ಕಡತಗಳು ಹಾಗೂ ಮಾಲುಗಳನ್ನು ಪ್ರಭಾರದ ಮೂಲಕ ವಹಿಸಿಕೊಂಡಿರುತ್ತೀರಿ. ನೀವು ಪ್ರಭಾರ ವಹಿಸಿಕೊಂಡ ಪ್ರಕರಣಗಳ ಪೈಕಿ ಮೊಕದ್ದಮೆ ಸಂಖ್ಯೆ : 10/2005 ಕಲಂ 468, 471 420, ಐ.ಪಿ.ಸಿ. ಪ್ರಕರಣದಲ್ಲಿ ತನಿಖೆ ಬಾಕಿ ಇದ್ದು, ಈ ಪ್ರಕರಣದ ವಿವರವನ್ನು ಅಪರಾಧ ಪುಸ್ತಕದಲ್ಲಿ ನಮೂದಿಸಬೇಕಾಗಿದ್ದು, ನಮೂದಿಸಿರುವುದಿಲ್ಲ ಹಾಗೂ ಈ ಪ್ರಕರಣದ ಮಾಲುಗಳ ವಿವರಗಳನ್ನು ಮುದ್ದೇಮಾಲು ಪುಸ್ತಕದಲ್ಲಿ ನಮೂದಿಸಬೇಕಾಗಿದ್ದು ನಮೂದಿಸಿರುವುದಿಲ್ಲ. ಈ ಪ್ರಕರಣದ ಪ್ರಭಾರವನ್ನು ದಿನಾಂಕ : 26–09–2006 ರಂದು ವಹಿಸಿಕೊಂಡಿದ್ದರೂ ಸಹ ಇಲ್ಲಿಯವರೆಗೆ ನ್ಯಾಯಾಲಯಕ್ಕೆ ಅಂತಿಮ ವರದಿ ಸಲ್ಲಿಸಿರುವುದಿಲ್ಲ ಹಾಗೂ ಪ್ರಕರಣದ ಕಡತ ಕಾಣೆಯಾಗಲು ಕಾರಣರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಕರ್ತವ್ಯಲೋಪ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 17–03–2011 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ದಿನಾಂಕ : 19–05–10 ರಿಂದ 03–09–2010 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 18–08–2011ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು

ಭಾಗಶಃ ಮಾರ್ಪಡಿಸಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಲಾಗಿದೆ. ದಿನಾಂಕ : 19–5–10 ರಿಂದ 03–09–10ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ತೀವ್ರ ನಿರ್ಲಕ್ಷತೆ, ಕರ್ತವ್ಯಲೋಪ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 109 ಪೊಸಿಅ 2011, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ ನಾಗರಾಜಯ್ಯ, ನಿವೃತ್ತ ಪಿ.ಎಸ್.ಐ., ಎಲೆಕ್ಟ್ರಾನಿಕ್ ಸಿಟಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್.856

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

ವಿಷಯ : ಶ್ರೀ ಪ್ರಭು ಉಪ್ಪಿನ, ಪಿ.ಎಸ್.ಐ., ಬೀದರ್ ಗ್ರಾಮೀಣ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ

ಓದಲಾಗಿದೆ :

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು ಬೀದರ್, ಇವರ ಆದೇಶ ಸಂಖ್ಯೆ: ಲಶಿ/37/ಬೀ/2009 (ಓ.ಬಿ. ಸಂಖ್ಯೆ : 1041/2009) ದಿನಾಂಕ : 01–12–09.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ : ಅಪೀಲು/07/ಈವ/2010 (ಓ.ಬಿ. ಸಂಖ್ಯೆ : 135/ಈವ/2010/947 ದಿನಾಂಕ : 03–03–10.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 25–3–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರದ ಸಂಖ್ಯೆ : ಅಪೀಲು (2)/6/2010–11 ದಿನಾಂಕ : 16–6–2010

**ಪ್ರಸ್ತಾವನೆ :**

ಶ್ರೀ ಪ್ರಭು ಉಪ್ಪಿನ, ಪಿ.ಎಸ್.ಐ., ಬೀದರ್ ಗ್ರಾಮೀಣ ಪೊಲೀಸ್ ಠಾಣೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ ಎಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ನೀವು ಶಹಬಾದ ಗ್ರಾಮೀಣ ಪೊಲೀಸ್ ಠಾಣೆಯ ಗು.ನಂ. 53/2005 ಕಲಂ 328 ಐ.ಪಿ.ಸಿ. ಮತ್ತು 32, 34 ಅಬಕಾರಿ ಕಾಯ್ದೆ ಪ್ರಕರಣದಲ್ಲಿ ಕ್ರಮಬದ್ಧವಾದ ತನಿಖೆ ಪೂರೈಸಲು ವಿಫಲರಾಗಿ ನ್ಯಾಯಾಲಯದಿಂದ ಕಟು ಟೀಕೆ ಜಾರಿಯಾಗಲು ಹೊಣೆಗಾರರಾಗಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಬೀದರ್, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 01–12–2009 ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 03–03–10ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯಲೋಪ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 52 ಪೊಸಿಅ 2010, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪ್ರಭು ಉಪ್ಪಿನ ಪಿ.ಎಸ್.ಐ., ಬೀದರ್ ಗ್ರಾಮೀಣ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.857

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

ವಿಷಯ : ಶ್ರೀ ಹೆಚ್.ಜೆ. ಸೋಮಶೇಖರಯ್ಯ, ನಿವೃತ್ತ ಪಿ.ಎಸ್.ಐ. ನೆಲಮಂಗಲ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

ಓದಲಾಗಿದೆ :
1) ಶಿಸ್ತು ಪ್ರಾಧಿಕಾರ ಹಾಗೂ ಅಪರ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು ಇವರ ಆದೇಶ ಸಂಖ್ಯೆ: 85/ಡಿಇ.1/ಆರ್.6/2006 ದಿನಾಂಕ : 20–09–2010.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ : 72/ಅಪೀಲು–1/2010 ದಿನಾಂಕ : 04–12–2010.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ 05–01–2011 ಮತ್ತು 09–12–2011.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಅಪೀಲು (2)/82/ 2010–11 ದಿನಾಂಕ : 16–3–2011.

**ಪ್ರಸ್ತಾವನೆ :**

ಶ್ರೀ ಹೆಚ್.ಜೆ. ಸೋಮಶೇಖರಯ್ಯ ಇವರು ಬೆಂಗಳೂರಿನ ಫ್ರೇಜರ್ ಟೌನ್ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ಹಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ನಡತೆ ನಿಯಮಗಳನ್ನು ಉಲ್ಲಂಘಿಸಿ ನ್ಯಾಯಾಂಗ ಬಂಧನದಲ್ಲಿ ಇದ್ದು, ಇಲಾಖೆಯ ಶಿಸ್ತು ಘನತೆಗೆ ಧಕ್ಕೆ ಉಂಟು ಮಾಡಿರುವುದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

ಶ್ರೀ ಹೆಚ್.ಜೆ. ಸೋಮಶೇಖರಯ್ಯ ಪಿ.ಎಸ್.ಐ. ಆದ ನೀವು ಫ್ರೇಜರ್ ಟೌನ್ ಪೊಲೀಸ್ ಠಾಣೆ ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ತಿರುವೆಂಕಟಸ್ವಾಮಿ ಗಾರ್ಡನ್, ಕದರಪ್ಪ ರಸ್ತೆ, 9ನೇ ಅಡ್ಡ ರಸ್ತೆ, ಕಾಕ್ಸ್ ಟೌನ್, ಬೆಂಗಳೂರು, ಇಲ್ಲಿ ವಾಸವಾಗಿರುವ ಶ್ರೀಮತಿ ಸುಶೀಲಮ್ಮ ಮತ್ತು ಶಾಂತಿಯವರಿಗೆ ಮನೆ ವಿಷಯದಲ್ಲಿ ಅಕ್ಟೋಬರ್ ತಿಂಗಳಲ್ಲಿ ಜಗಳವಾಗಿದ್ದು, ಈ ಸಂಬಂಧ ಶ್ರೀಮತಿ ಸುಶೀಲಮ್ಮ ರವರು ಫ್ರೇಜರ್ ಟೌನ್ ಪೊಲೀಸ್ ಠಾಣೆಗೆ ದೂರನ್ನು ಕೊಟ್ಟಿರುತ್ತಾರೆ. ಈ ಸಂಬಂಧ ನೀವು ಮೇಲ್ಕಂಡ ಪ್ರಕರಣದಲ್ಲಿ ಶ್ರೀಮತಿ ಶಾಂತಿಯವರಿಂದ ನಿಮಗೆ ಸಹಾಯ ಮಾಡುತ್ತೇವೆಂದು ತಿಳಿಸಿ ಅವರಿಂದ ರೂ. 3,000/– ಗಳನ್ನು ಕೊಡಬೇಕೆಂದು ಒತ್ತಾಯ ಮಾಡಿ ಅವರಿಂದ ದಿನಾಂಕ : 28–11–2006 ರಂದು ರೂ. 3,000/– ಗಳ ಅಕ್ರಮ ಸಂಭಾವನೆ ಪಡೆಯುವಾಗ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿ ಬಿದ್ದಿರುತ್ತೀರಿ. ಈ ಸಂಬಂಧ ನಿಮ್ಮ ವಿರುದ್ಧ ಮಾನ್ಯ ಲೋಕಾಯುಕ್ತರವರು ಲಂಚ ನಿರೋಧ ಕಾಯ್ದೆ–1988ರ ಕಲಂ 7, 13(1) (ಡಿ) ಸಹವಾಚನ ಕಲಂ 13(2)ರ ಪ್ರಕಾರ ದಿನಾಂಕ : 28–11–2006 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊ.ಸಂ. 46/2006 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ. ಈ ರೀತಿಯಗಿ ನೀವು ಶಿಸ್ತಿನ ಇಲಾಖೆಯ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ಸರ್ಕಾರಿ ಅಧಿಕಾರಿ/ನೌಕರರಿಗೆ ಅನ್ವಯವಾಗುವಂತಹ ನಡತೆ ನಿಯಮವನ್ನು ಉಲ್ಲಂಘಿಸಿ ಒಂದು ಅಪರಾಧ ಪ್ರಕರಣದಲ್ಲಿ ಆರೋಪಿಯಾಗಿ ದಸ್ತಗಿರಿಗೆ ಒಳಪಟ್ಟು ನ್ಯಾಯಾಂಗ ಬಂಧನದಲ್ಲಿ ಇದ್ದಿದ್ದು ಮೇಲ್ನೋಟಕ್ಕೆ ಖಚಿತವಾಗಿರುತ್ತದೆ. ಈ ರೀತಿ ನೀವು ನಿಮ್ಮ ಸರ್ಕಾರಿ ಕರ್ತವ್ಯದಲ್ಲಿ ಕರ್ತವ್ಯಲೋಪ ಎಸಗಿದ್ದು ಇಲಾಖೆಯ ಶಿಸ್ತು ಘನತೆ ಮತ್ತು ಗೌರವಕ್ಕೆ ಧಕ್ಕೆ ಉಂಟು ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 20–09–2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ದಿನಾಂಕ : 05–12–2006 ರಿಂದ 16–07–2007 ರವರೆಗಿನ ಅಮಾನತ್ತಿನ ಅವಧಿಯನ್ನು ಇವರು ಅಮಾನತ್ತಿನ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 04–12–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ನಡತೆ ನಿಯಮಗಳನ್ನು ಉಲ್ಲಂಘಿಸಿ ನ್ಯಾಯಾಂಗ ಬಂಧನದಲ್ಲಿದ್ದು ಇಲಾಖೆಯ ಶಿಸ್ತು, ಘನತೆಗೆ ಧಕ್ಕೆ ಉಂಟು ಮಾಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಒಇ 4 ಪೊಸಿಅ 2011 ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಜೆ. ಸೋಮಶೇಖರಯ್ಯ, ನಿವೃತ್ತ ಪಿ.ಎಸ್.ಐ., ನೆಲಮಂಗಲ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್.858

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿ.ಓ. ಶಿವಕುಮಾರ್, ಪಿ.ಐ., ಚಿಕ್ಕಪೇಟೆ ಪೊಲೀಸ್ ಠಾಣೆ, ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ(2)/108/ಸಿಓಪಿ/ಆರ್–7/2010 ದಿನಾಂಕ: 02–11–2010.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)97/2010–11 ದಿನಾಂಕ: 10–03–2011
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19–07–2011.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)97/2010–11 ದಿನಾಂಕ: 07–10–2011.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 181 ಸಿಎನ್‌ಎಸ್ 11 ದಿನಾಂಕ: 06–02–2012.

**ಪ್ರಸ್ತಾವನೆ :**

ಶ್ರೀ ಪಿ.ಓ. ಶಿವಕುಮಾರ್, ಪಿ.ಐ. ಇವರು ಬೆಂಗಳೂರಿನ ಚಿಕ್ಕಪೇಟೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವೆಸಗಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965 ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಪಿ.ಓ. ಶಿವಕುಮಾರ್, ಪಿ.ಐ., ಆದ ನೀವು ಚಿಕ್ಕಪೇಟೆ ಪೊಲೀಸ್ ಠಾಣೆ, ಬೆಂಗಳೂರು ನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ: 08–9–2010 ರಂದು ಸಿ.ಸಿ.ಬಿ. ಘಟಕದ ಮಹಿಳೆ ಮತ್ತು ಮಾದಕ ದ್ರವ್ಯ ದಳದ ಅಧಿಕಾರಿಗಳು ನಿಮ್ಮ ಠಾಣಾ ಸರಹದ್ದಿನ ಚಿಕ್ಕಪೇಟೆ ಪಿ.ಎಸ್.ಲೇನ್ ನಂ. 35 ರಲ್ಲಿರುವ ರಾಮ್ ಟ್ರೇಡಿಂಗ್ ವಾಚ್ ಮುಂಭಾಗ ಸುರೇಶ್ ಭವರ್‌ಲಾಲ್ ಮತ್ತು ಪಹಡ್‌ಸಿಂಗ್ ರವರು ಅಕ್ರಮವಾಗಿ ಸಾರ್ವಜನಿಕರಿಗೆ ಮಾರಾಟ ಮಾಡಲು 960 ಗ್ರಾಂ ತೂಕದ ಅಫೀಮು ಅನ್ನು ಇಟ್ಟುಕೊಂಡಿದ್ದುದನ್ನು ಪತ್ತೆ ಮಾಡಿ, ಆಸಾಮಿಗಳನ್ನು ವಶಕ್ಕೆ ತೆಗೆದುಕೊಂಡು ನಿಮ್ಮ ಠಾಣೆಗೆ ಬಂದು ನೀಡಿದ ದೂರಿನ ಮೇರೆಗೆ ನಿಮ್ಮ ಠಾಣಾ ಮೊ.ಸಂ. 170/10 ಕಲಂ 17(ಬಿ) ಆಫ್ ಎನ್.ಡಿ.ಪಿ.ಎಸ್. ಆಕ್ಟ್ ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. ನಿಮಗೆ ಹಲವಾರು ಬಾರಿ ನಿಮ್ಮ ಠಾಣಾ ಸರಹದ್ದಿನಲ್ಲಿ ನಡೆಯುತ್ತಿರುವ ಅಕ್ರಮ ದಂಧೆಗಳ ಹಾಗೂ ಚಟುವಟಿಕೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಕಾನೂನು ಕ್ರಮ ಕೈಗೊಳ್ಳುವಂತೆ ನಿಮ್ಮ ಮೇಲಧಿಕಾರಿಗಳು ಅಪರಾಧ ವಿಮರ್ಶಾ ಸಭೆಯಲ್ಲಿ ಸೂಚನೆ ನೀಡಿದ್ದರೂ ಸಹ ನೀವು ಪಾಲನೆ ಮಾಡಲು ಯಾವುದೇ ಆಸಕ್ತಿ ವಹಿಸದೇ ಇದ್ದುದರಿಂದ ಸಿ.ಸಿ.ಬಿ. ಘಟಕದ ಅಧಿಕಾರಿಗಳು ನಿಮ್ಮ ಠಾಣಾ ಸರಹದ್ದಿನಲ್ಲಿ ಅಕ್ರಮ ದಂಧೆಯನ್ನು ಪತ್ತೆ ಮಾಡಿರುತ್ತಾರೆ. ಈ ರೀತಿ ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾದ ನೀವು ಮೇಲಧಿಕಾರಿಗಳ ಸೂಚನೆಗಳನ್ನು ಪಾಲನೆ ಮಾಡಿ, ಅಕ್ರಮ ದಂಧೆ ಹಾಗು ಚಟುವಟಿಕೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಕಾನೂನು ಕ್ರಮ ಕೈಗೊಳ್ಳದೆ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುತ್ತೀರಿ."

ಆ.ಪೊ.ಅ. ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 02–11–2010ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–03–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ಈ ಪ್ರಕರಣದಲ್ಲಿ ನೇರವಾಗಿ ಭಾಗಿಯಾಗಿರುವುದಿಲ್ಲವೆಂದು ಕಂಡು ಬಂದಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತು ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 81 ಪೊಸಿಅ 2011, ಬೆಂಗಳೂರು, ದಿನಾಂಕ: 23–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ (25)ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಓ. ಶಿವಕುಮಾರ್, ಪಿ.ಐ., ಚಿಕ್ಕಪೇಟೆ ಪೊಲೀಸ್ ಠಾಣೆ, ಬೆಂಗಳೂರು, ಇವರಿಗೆ ದಿನಾಂಕ: 02–11–2010 ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮಾರ್ಪಡಿಸಿ "ವಾಗ್ದಂಡನೆ" ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 859

**ಒಳಾಡಳಿತ ಸಚಿವಾಲಯ**

**ವಿಷಯ :** 2011–12ನೇ ಸಾಲಿನ ಪೊಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:VI–21011/10/2011-PM-I, ದಿನಾಂಕ: 02–01–2012.

2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ:ಎಡಿಜಿಪಿ/ಸಿಎಲ್‌ಅಂಡ್‌ಎಂ/ಎಂಡಿಎನ್–1/2012, ದಿನಾಂಕ: 23/01/2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಕೇಂದ್ರ ಸರ್ಕಾರವು 2011–12ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿ ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡ ಕ್ರಿಯಾ ಯೋಜನೆಯನ್ವಯ ವಿವಿಧ ಕಾರ್ಯಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ರೂ. 31,64,83,000/–ಗಳನ್ನು ಮಂಜೂರು ಮಾಡಿದೆ.

ಮೇಲೆ ಓದಲಾದ (2)ರ ದಿನಾಂಕ: 23/01/2012ರ ಪತ್ರದಲ್ಲಿ ಮನಿ ಮತ್ತು ಅಮನಿಯವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 2011–12ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿ ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡ ಕ್ರಿಯಾ ಯೋಜನೆಯನ್ವಯ ವಿವಿಧ ಕಾರ್ಯಚಟುವಟಿಕೆಗಳಿಗಾಗಿ ಉಪಯೋಗಿಸಿಕೊಳ್ಳಲು ಕೇಂದ್ರ ಸರ್ಕಾರವು ಮಂಜೂರು ಮಾಡಿರುವ ರೂ. 31,64,83,000/–ಗಳನ್ನು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 01 ಪಿಎಫ್‌ಎಸ್ 2012, ಬೆಂಗಳೂರು, ದಿನಾಂಕ: 06–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2011–12ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿ ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡ ಕ್ರಿಯಾ ಯೋಜನೆಯನ್ವಯ ವಿವಿಧ ಕಾರ್ಯಚಟುವಟಿಕೆಗಳಿಗಾಗಿ ಉಪಯೋಗಿಸಿಕೊಳ್ಳಲು ರೂ. 31,64,83,000/– (ಮುವತ್ತೊಂದು ಕೋಟಿ ಅರವತ್ನಾಲ್ಕು ಲಕ್ಷದ ಎಂಬತ್ಮೂರು ಸಾವಿರ ರೂಪಾಯಿಗಳು ಮಾತ್ರ) 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–115–0–00–125 ಯೋಜನೇತರ ಅಡಿಯಲ್ಲಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 64 ವೆಚ್ಚ–11/12, ದಿನಾಂಕ: 01/03/2012ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಜಮ್ಮ**

ಪಿ.ಆರ್. 860

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಯಾದಗಿರಿ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಯೋಇ:309:ಪಿಟಿಪಿ/94, ದಿನಾಂಕ: 07–08–1995

2. ಭಾರತೀಯ ಜನತಾ ಪಾರ್ಟಿ ರಾಜ್ಯ ಉಪಾಧ್ಯಕ್ಷರು ಪತ್ರ ಸಂಖ್ಯೆ:ರಾಕಾ/ನಾನಿ/202/2012 ದಿನಾಂಕ: 08/02/2012

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ(2)ರ ಭಾರತಿಯ ಜನತಾ ಪಾರ್ಟಿಯ ರಾಜ್ಯ ಉಪಾಧ್ಯಕ್ಷರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಯಾದಗಿರಿ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 89 ಯೋವಿವಿ 2011, ಬೆಂಗಳೂರು, ದಿನಾಂಕ: 07ನೇ ಮಾರ್ಚ್ 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಯಾದಗಿರಿ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ಹೊರಡಿಸಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಐದು ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಯಾದಗಿರಿ ಜಿಲ್ಲೆ, ಜಿಲ್ಲಾ ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀಮತಿ ಇಂದಿರಾ ಕೋಂ, ಮಲ್ಲಿಕಾರ್ಜುನ, ಚಿಲ್ಲಾಳ, ಅಂಚೆ:ಸಾಳೇರ ಓಣಿ, ಶಹಪೂರ, ಯಾದಗಿರಿಜಿಲ್ಲೆ | ಮಹಿಳೆ |
| 2. | ಶ್ರೀ ನಾಗರಾಜ ಬಿನ್ ಹುಸೇನಪ್ಪ, ಈಟೀಕರ, ಸ್ವಾಮಿ ವಿವೇಕಾನಂದನಗರ, ಯಾದಗಿರಿ, ಯಾದಗಿರಿ ಜಿಲ್ಲೆ | ಎಸ್.ಸಿ. |

| | | |
|---|---|---|
| 3 | ಶ್ರೀ ಮಲ್ಲಿಕಾರ್ಜುನ ಗುಳ್ಳೇದ, ಅಂಚೆ:ಯರಗೋಳ ಯಾದಗಿರಿ ತಾಲ್ಲೂಕು, ಯಾದಗಿರಿ ಜಿಲ್ಲೆ | ಹಿಂ.ವರ್ಗ |
| 4. | ಶ್ರೀ ವೆಂಕಟರೆಡ್ಡಿ ತುಮಕೂರ ಬಿನ್ ಬಸಣ್ಣ, ಮನೆ ನಂ. 5–1–239/19, ಪ್ಲಾಟ್ ನಂ. 27, 'ವಿಶ್ವರಾಧ್ಯ ನಿಲಯ', ಲಕ್ಷ್ಮೀನಗರ, ಯಾದಗಿರಿ ತಾಲ್ಲೂಕು, ಯಾದಗಿರಿ ಜಿಲ್ಲೆ | ಸಾಮಾನ್ಯ |
| 5. | ಶ್ರೀ ಮಹಮ್ಮದ ಸಲೀಂ ಬಿನ್ ಬಡೇಸಾಬ ವರ್ತಿ, ಕಟಗರ ಗಲ್ಲಿ, ಸುರುಪುರ ಅಂಚೆ, ಯಾದಗಿರಿ ಜಿಲ್ಲೆ | ಅ.ಸಂ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 861

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಯೋಇ:309:ಪಿಟಿಪಿ/94, ದಿನಾಂಕ: 07–08–1995
2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ/ ರಾಕಾ/ನಾನಿ/1021/2011, ದಿನಾಂಕ: 30/12/2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ(2)ರ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಯೋಜನಾ ಸಚಿವರ ಶಿಫಾರಸ್ಸಿನಂತೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವ ಮೇರೆಗೆ ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 68 ಯೋವಿವಿ 2009(ಭಾ) ಬೆಂಗಳೂರು, ದಿನಾಂಕ: 05 ಮಾರ್ಚ್, 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ನಾಮನಿರ್ದೇಶನ ಮಾಡಿ ಹೊರಡಿಸಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಐವರನ್ನು ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಶಿವಮೊಗ್ಗ ಜಿಲ್ಲೆ, ಜಿಲ್ಲಾ ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀಮತಿ ನಿರ್ಮಲ ಕೋಂ ಗಣೇಶ್, ಪೇಟೆ ಬೀದಿ, ಹೊಳೆಹೊನ್ನೂರು, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ಮಹಿಳೆ |
| 2. | ಶ್ರೀ ಹಾಲೇಶ್ ನಾಯ್ಕ್, ಮಾಜಿ ಗ್ರಾಮ ಪಂಚಾಯಿತಿ ಅಧ್ಯಕ್ಷರು, ಕಲ್ಲನಹಳ್ಳಿ ಕೂಡ್ಲಿಗೆರೆ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ಎಸ್.ಸಿ. |
| 3 | ಶ್ರೀ ಕೆ.ಎಸ್. ಗುರುಮೂರ್ತಿ, ಮಾಳೇರಕೇರಿ, ಶಿಕಾರಿಪುರ ಟೌನ್, ಶಿವಮೊಗ್ಗ ಜಿಲ್ಲೆ | ಸಾಮಾನ್ಯ |
| 4. | ಶ್ರೀ ಅಶೋಕ್ ಬಿನ್ ನೇಮಣ್ಣ, ಬಿದರಮನೆ ಅರಗ ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ಬಿ.ಸಿ.ಎಂ |
| 5. | ಶ್ರೀ ಮಂಜಯ್ಯ ಜೈನ್ ಬಿನ್ ಚಂಡಯ್ಯ ಜೈನ್, ಸಂಸೆ, ಚದರವಳ್ಳಿ ಅಂಚೆ, ಸಾಗರ ತಾ: ಶಿವಮೊಗ್ಗ ಜಿಲ್ಲೆ | ಅ.ಸಂ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಪಿ.ಆರ್. 862

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸಲು ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಯೋಇ:309:ಪಿಟಿಪಿ/94, ದಿನಾಂಕ: 07–08–1995

2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ/ ರಾಕಾ/ನಾನಿ/1009/2011, ದಿನಾಂಕ: 29/12/2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ(2)ರ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಯೋಜನಾ ಸಚಿವರ ಶಿಫಾರಸ್ಸಿನಂತೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವ ಮೇರೆಗೆ ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 118 ಯೋವಿವಿ 2012 ಬೆಂಗಳೂರು, ದಿನಾಂಕ: 06ನೇ ಮಾರ್ಚ್, 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಆಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಹಿಂದೆ ಹೊರಡಿಸಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಐದು ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲಾಗಿದೆ.

**ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ಮಟ್ಟದ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀ ಧನಪಾಲ್, ರಂಗೇನಹಳ್ಳಿ ಅಂಚೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | ಎಸ್.ಸಿ |
| 2. | ಶ್ರೀ ಅಶೋಕ್ ಬಿನ್ ಗಂಗಾಧರಪ್ಪ<br>ವಡೇರಹಳ್ಳಿ, ಚೌಳ ಹಿರಿಯೂರು ಅಂಚೆ, ಕಡೂರು ತಾ ಚಿಕ್ಕಮಗಳೂರು ಜಿಲ್ಲೆ | ಹಿಂ.ವ. |
| 3 | ಶ್ರೀ ಗೌತಮ್ ಚಂದ್, ಜವಳಿ ವ್ಯಾಪಾರಿಗಳು<br>ಎಂ.ಜಿ. ರಸ್ತೆ, ಚಿಕ್ಕಮಗಳೂರು | ಅ.ಸಂ. |
| 4. | ಶ್ರೀಮತಿ ಸೌಮ್ಯ ಕಾರಂತ್<br>ಯರಂಜಾಳು, ಹೊನ್ನವಳ್ಳಿ ಅಂಚೆ, ಶೃಂಗೇರಿ ತಾ: ಚಿಕ್ಕಮಗಳೂರು ಜಿಲ್ಲೆ | ಮಹಿಳೆ |
| 5. | ಶ್ರೀ ಪ್ರಮೋದ್ ದುಂಡುಗ, ದುಂಡುಗ ಅಂಚೆ<br>ಮೂಡಿಗೆರೆ ತಾ: ಚಿಕ್ಕಮಗಳೂರು ಜಿಲ್ಲೆ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಜಿ. ಮುಳಕೂರ**

ಪಿ.ಆರ್. 863

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸಲು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಯೋಇ:309:ಪಿಟಿಪಿ/94, ದಿನಾಂಕ: 07–08–1995

2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ/ ರಾಕಾ/ನಾನಿ/1033/2012, ದಿನಾಂಕ: 03/1/2012

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ(2)ರ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಯೋಜನಾ ಸಚಿವರ ಶಿಫಾರಸ್ಸಿನಂತೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವ ಮೇರೆಗೆ ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 19 ಯೋವಿವಿ 2012 ಬೆಂಗಳೂರು, ದಿನಾಂಕ: 05ನೇ ಮಾರ್ಚ್, 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ಹೊರಡಿಸಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಆರು ಜನರನ್ನು ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀ ಪದ್ಮಣ್ಣ ಬಿನ್ ಲೇ:ವೀರನಾಗಪ್ಪ, ಅಂಗಡಿ ಮಲ್ಲನಹಳ್ಳಿ, ಹನುಮನಹಳ್ಳಿ ಅಂಚೆ, ದೊಡ್ಡೇರಿ ಹೋಬಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ | ಸಾಮಾನ್ಯ |
| 2. | ಶ್ರೀ ಎಂ.ಆರ್. ಲಕ್ಷ್ಮೀನರಸಪ್ಪ ಬಿನ್ ದಾಸರಂಗಪ್ಪ, ಮಾರುತಿ ನಗರ ಬಡಾವಣೆ, ಮಿಡಿಗೇಶಿ, ಮಧುಗಿರಿ ತಾ: ತುಮಕೂರು ಜಿಲ್ಲೆ | ಸಾಮಾನ್ಯ |
| 3 | ಶ್ರೀ ರಾಮಣ್ಣ ಬಿನ್ ಗೋವಿಂದಪ್ಪ, ಕಮ್ಮನಕೋಟೆ, ಚಿನಕವಜ್ರ ಅಂಚೆ, ಕಸಬಾ ಹೋಬಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ | ಬಿ.ಸಿ.ಎಂ |
| 4. | ಶ್ರೀಮತಿ ಭಾಗಮ್ಮ ಕೋಂ ಎನ್ ನರಸಿಂಹಯ್ಯ (ಕಾಕಿನಾಡ) 4ನೇ ಬ್ಲಾಕ್, ಕೊಡಿಗೇನಗಳ್ಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ | ಮಹಿಳೆ |
| 5. | ಶ್ರೀ ಬಾಲರಾಜು, ಕೋಡ್ಲಾಪುರ ಮತ್ತು ಅಂಚೆ, ಪುರವರ ಹೋಬಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ. | ಪ.ಪಂ |
| 6. | ಶ್ರೀ ಸೈಯದ್ ಹುಸೇನ್ ಶರೀಫ್ ಬಿನ್ ಫಕ್ರುದ್ದೀನ್ ಸಾಬ್, ಶಂಬೋನಹಳ್ಳಿ, ಗಂಜನಗುಂಟೆ ಅಂಚೆ, ಕಸಬಾ ಹೋಬಳಿ, ಮಧುಗಿರಿ ತಾ: ತುಮಕೂರು ಜಿಲ್ಲೆ | ಅ.ಸಂ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಜಿ. ಮುಳಕೂರ್**

ಪಿ.ಆರ್. 864

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011ನ್ನು ಅನುಷ್ಠಾನಗೊಳಿಸಲು ಮಿಷನ್ ಮೋಡ್‌ನಲ್ಲಿ **ಸಕಾಲ ಮಂಡಳಿ** ರಚಿಸುವ ಕುರಿತು.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 39 ಶಾಸನ 2011, ದಿನಾಂಕ: 02/01/2012.
2) ಅಧಿಸೂಚನೆ ಸಂಖ್ಯೆ: ಸಿಆಸುಇ 04 ಇಕಾಅ 2012, ದಿನಾಂಕ: 14/02/2012.
3) ಅಧಿಸೂಚನೆ ಸಂಖ್ಯೆ: ಸಿಆಸುಇ 28 ಇಕಾಅ 2012, ದಿನಾಂಕ: 27/02/2012.
4) ಅಧಿಸೂಚನೆ ಸಂಖ್ಯೆ: ಸಿಆಸುಇ 04 ಇಕಾಅ 2012, ದಿನಾಂಕ: 01/03/2012
5) ಕಡತ ಸಂಖ್ಯೆ: ಸಿಆಸುಇ 20 ಇಕಾಅ 2012.

**ಪ್ರಸ್ತಾವನೆ :**

11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಯನ್ನು ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ವನ್ನು ರಾಜ್ಯ ಶಾಸನ ಸಭೆಯು ಸರ್ವಾನುಮತದಿಂದ ಅಂಗೀಕರಿಸಿತು. ಸಾರ್ವಜನಿಕರಿಗೆ ಸರ್ಕಾರಿ ಅಧಿಕಾರಿಗಳ ಹೊಣೆಗಾರಿಕೆಯನ್ನು ಖಾತರಿಪಡಿಸುವ ಮೂಲಕ ಸುಧಾರಿತ ಸೇವೆಯನ್ನು ನೀಡುವುದು ಈ ಅಧಿನಿಯಮದ ಗುರಿಯಾಗಿದೆ. ಇದು ಆಡಳಿತದಲ್ಲಿ ಹೆಚ್ಚಿನ ಪಾರದರ್ಶಕತೆ ಹಾಗೂ ದಕ್ಷತೆಯನ್ನು ತರುವುದಲ್ಲದೇ ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಕುಂದುಕೊರತೆ ಹಾಗೂ ಭ್ರಷ್ಟ ಪದ್ಧತಿಗಳನ್ನು ಕಡಿಮೆ ಮಾಡುತ್ತದೆ.

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 02/01/2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಮಸೂದೆಯನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಭಾಗ–4ಎ ಯಲ್ಲಿ ಪ್ರಕಟಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ದಿನಾಂಕ: 14/02/2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಕರಡು ನಿಯಮಗಳ ಬಗ್ಗೆ ಸಾರ್ವಜನಿಕರಿಂದ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಿ 15 ದಿನಗಳ ಕಾಲಾವಕಾಶ ನೀಡಿ ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ನಿಯಮಗಳು 2012ನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯ ಭಾಗ–4ಎ ನಲ್ಲಿ ದಿನಾಂಕ: 01/03/2012 ರಂದು ಪ್ರಕಟಿಸಿ ಜಾರಿಗೊಳಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು ಪೈಲೆಟ್ ಲಾಂಚ್ ಮಾಡಿದ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಾಯಕ ಕಂದಾಯ ಅಧಿಕಾರಿಗಳ ಕಛೇರಿ, ಬೆಂಗಳೂರು ಇವುಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011ನ್ನು ದಿನಾಂಕ: 01/03/2012 ರಿಂದ ಜಾರಿಗೆ ತರಲಾಗಿದೆ.

ನಾಗರೀಕರಿಗೆ ಕಾಲಮಿತಿಯೊಳಗೆ ಸೇವೆಯನ್ನು ನೀಡುವುದು ಕಾರ್ಯಕ್ರಮದಲ್ಲಿ ಸೇರಿಸಿಕೊಳ್ಳಲಾಗಿರುವಂತೆ, ಒಂದು ಕೇಂದ್ರೀಕೃತ ಮಾಹಿತಿ ತಂತ್ರಜ್ಞಾನ ವ್ಯವಸ್ಥೆಯು ಅತ್ಯಂತ ಅವಶ್ಯಕವಾಗಿದ್ದು ಈ ಕಾರ್ಯವನ್ನು ರಾಷ್ಟ್ರೀಯ ಮಾಹಿತಿ ಕೇಂದ್ರ, ನವದೆಹಲಿ ಇವರಿಗೆ ವಹಿಸಲಾಗಿದೆ. ಈಗಾಗಲೇ ಬಹುತೇಕ ಇಲಾಖೆಗಳು ಮಾಹಿತಿ ತಂತ್ರಜ್ಞಾನದ ಮೂಲಭೂತ ಸೌಲಭ್ಯ ಹಾಗೂ ತಂತ್ರಾಂಶಗಳನ್ನು ಹೊಂದಿರುತ್ತದೆ. ಉಳಿದ ಇಲಾಖೆಗಳಿಗೆ ಗಣಕಯಂತ್ರಗಳು ಹಾಗೂ ತರಬೇತಿಯನ್ನು ನೀಡಬೇಕಾಗಿದೆ. ಉದಾ: ಆಯುಷ್ ಇಲಾಖೆ, ಕಾರ್ಮಿಕ ಇಲಾಖೆ ಇತ್ಯಾದಿ. (www.kgsc.nic.in)

ಈ ಅಧಿಸೂಚನೆಯಡಿ ವಿವಿಧ ಸೇವೆಗಳಿಗೆ ನಾಗರೀಕರು ಅರ್ಜಿಯನ್ನು ಸಲ್ಲಿಸುವ ಬಗ್ಗೆ ಪ್ರಶ್ನೆಗಳನ್ನು ಹಾಗೂ ಅವರ ಅರ್ಜಿಗಳ ಸ್ಥಿತಿಗತಿಗಳ ಬಗ್ಗೆ ವಿಚಾರಣೆಗೆ ಸಂಬಂಧಿಸಿದಂತೆ ಕಾರ್ಯ ನಿರ್ವಹಿಸಲು ಒಂದು ಕರೆ ಕೇಂದ್ರವನ್ನು ಯು.ಐ.ಡಿ. ಕರೆ ಕೇಂದ್ರಗಳ ಮಾದರಿಯಲ್ಲಿ ಇ–ಆಡಳಿತ ಇಲಾಖೆಯಿಂದ ಸ್ಥಾಪಿಸಲಾಗಿದೆ. ದೂರವಾಣಿ ಸಂಖ್ಯೆ: 44554455 ಮತ್ತು ವೆಬ್ ವಿಳಾಸ: kgsc@nic.in

ರಾಜ್ಯದ ಜನತೆಗೆ ಈ ಕಾಯ್ದೆಯ ನಿಬಂಧನೆಗಳ ಬಗ್ಗೆ ಸೂಕ್ತ ಮಾಹಿತಿಯನ್ನು ಒದಗಿಸುವ ಸಂಬಂಧ ವಿವಿಧ ಮಾಧ್ಯಮಗಳ ಮೂಲಕ ನಾಗರೀಕರಲ್ಲಿ ಜಾಗೃತಿ ಹೆಚ್ಚಿಸುವ ಸಲುವಾಗಿ ಸೂಕ್ತ ಕ್ರಮ ತೆಗೆದುಕೊಳ್ಳುವ ಜವಾಬ್ದಾರಿಯನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಗೆ ವಹಿಸಲಾಗಿದೆ.

ಅದೇ ರೀತಿ ಎಲ್ಲಾ 11 ಇಲಾಖೆಗಳ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಪೈಲಟ್ ಲಾಂಚಿನ ಸಂಬಂಧ ಬೆಂಗಳೂರಿನಲ್ಲಿ ದಿನಾಂಕ 13 ರಿಂದ 16ನೇ ಫೆಬ್ರವರಿ 2012ರಂದು ತರಬೇತಿ ನೀಡಲಾಗಿದೆ. ಪೈಲಟ್ ಲಾಂಚಿಗೆ ಆಯ್ಕೆಯಾಗಿರುವ ನಾಲ್ಕು ಜಿಲ್ಲೆಗಳಾದ ಧಾರವಾಡ, ಚಿತ್ರದುರ್ಗ, ಬೀದರ್ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮೈಸೂರಿನ ಆಡಳಿತ ತರಬೇತಿ ಸಂಸ್ಥೆ ಮತ್ತು ಜಿಲ್ಲಾ ತರಬೇತಿ ಸಂಸ್ಥೆಗಳ ಮುಖಾಂತರ ದಿನಾಂಕ 16–02–2012ರಿಂದ 25–02–2012ರವರೆಗೆ ತರಬೇತಿಯನ್ನು ಆಯೋಜಿಸಲಾಗಿತ್ತು. ಸದ್ಯದಲ್ಲೇ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011ವನ್ನು ರಾಜ್ಯಾದ್ಯಂತ ಜಾರಿಮಾಡಲಿದ್ದು, ಈ ಸಂಬಂಧ ಎಲ್ಲಾ ಜಿಲ್ಲೆಗಳ 11 ಇಲಾಖೆಗಳ ಅಧಿಕಾರಿ/ಸಿಬ್ಬಂದಿಗಳಿಗೆ ತರಬೇತಿಯನ್ನು ಮೈಸೂರಿನ ಆಡಳಿತ ತರಬೇತಿ ಸಂಸ್ಥೆ ಮತ್ತು ಜಿಲ್ಲಾ ತರಬೇತಿ ಸಂಸ್ಥೆಗಳ ಮುಖಾಂತರ ನೀಡಬೇಕಾಗುವುದು.

ಮೇಲೆ ಓದಲಾದ ಉಲ್ಲೇಖ (5)ರಲ್ಲಿ ಕರ್ನಾಟಕ ನಾಗರೀಕ ಸೇವಾ ಖಾತರಿ ಅಧಿನಿಯಮ 2011 (mission mode) ಮಾದರಿಯಲ್ಲಿ ಕೆಳಕಂಡಂತೆ **ಸಕಾಲ** ಮಂಡಳಿಯನ್ನು ರಚಿಸಲು ಉದ್ದೇಶಿಸಿದೆ

| | | |
|---|---|---|
| 1. | ಮಿಷನ್ ನಿರ್ದೇಶಕರು (ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) | 1 |
| 2. | ಮಿಷನ್ ಅಪರ ನಿರ್ದೇಶಕರುಗಳು (ಜಂಟಿ ಕಾರ್ಯದರ್ಶಿ ಅಪರ ಕಾರ್ಯದರ್ಶಿ) | 2 |
| 3. | ಆಡಳಿತಾಧಿಕಾರಿ | 1 |
| 4. | ಐ.ಟಿ. ಮ್ಯಾನೇಜರ್ | 1 |
| 5. | ಸಮಾಲೋಚಕರು (ನಿರ್ವಹಣೆ ಮತ್ತು ಆಡಳಿತ) | 2 |
| 6. | ಡಾಟಾ ಎಂಟ್ರಿ ಆಪರೇಟರ್/ಸಹಾಯಕರು | 4 |
| | | ಒಟ್ಟು – 11 |

ಮಿಷನ್ ನಿರ್ದೇಶಕರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಆಡಳಿತ ಸುಧಾರಣೆ)ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಾಗಿದ್ದು, ಸರ್ಕಾರದ ಇಬ್ಬರು ಹೆಚ್ಚುವರಿ/ಜಂಟಿ ಕಾರ್ಯದರ್ಶಿಯವರನ್ನು ಮಂಡಳಿಯ ಅಪರ ನಿರ್ದೇಶಕರುಗಳಾಗಿ ಹಾಗೂ ಇತರೆ ಸಿಬ್ಬಂದಿ ವರ್ಗಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ಉದ್ದೇಶಿಸಲಾಗಿದೆ. ಅಲ್ಲದೇ ಈ ಮಿಷನ್ ಮೂಲಕ ಈ ಕಾರ್ಯಕ್ರಮದ ಮೇಲ್ವಿಚಾರಣೆ, ತರಬೇತಿ, ಉಪಕರಣಗಳ ಪೂರೈಕೆ, ಸಿಬ್ಬಂದಿಗಳ ಪೂರೈಕೆ ಹಾಗೂ ಜನರಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುವುದು. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ಇಕಾಅ 2012, ಬೆಂಗಳೂರು, ದಿನಾಂಕ: 06–03–2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಪರಿಣಾಮಕಾರಿ ಅನುಷ್ಠಾನಗೊಳಿಸಲು ರೂ. 5.00 ಕೋಟಿಗಳ ವೆಚ್ಚದಲ್ಲಿ ಸಕಾಲ ಮಂಡಳಿಯನ್ನು (mission mode) ಕೆಳಕಂಡ ಅಧಿಕಾರಿ/ಸಿಬ್ಬಂದಿಯೊಂದಿಗೆ ರಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಮಿಷನ್ ನಿರ್ದೇಶಕರು (ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) | 1 |
| 2. | ಮಿಷನ್ ಅಪರ ನಿರ್ದೇಶಕರುಗಳು (ಜಂಟಿ ಕಾರ್ಯದರ್ಶಿ ಅಪರ ಕಾರ್ಯದರ್ಶಿ) | 2 |
| 3. | ಆಡಳಿತಾಧಿಕಾರಿ | 1 |
| 4. | ಐ.ಟಿ. ಮ್ಯಾನೇಜರ್ | 1 |
| 5. | ಸಮಾಲೋಚಕರು (ನಿರ್ವಹಣೆ ಮತ್ತು ಆಡಳಿತ) | 2 |
| 6. | ಡಾಟಾ ಎಂಟ್ರಿ ಆಪರೇಟರ್/ಸಹಾಯಕರು | 4 |
| | | ಒಟ್ಟು – 11 |

ಮಿಷನ್ ನಿರ್ದೇಶಕರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಆಡಳಿತ ಸುಧಾರಣೆ)ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಾಗಿದ್ದು, ಸರ್ಕಾರದ ಇಬ್ಬರು ಹೆಚ್ಚುವರಿ/ಜಂಟಿ ಕಾರ್ಯದರ್ಶಿಯವರನ್ನು ಮಂಡಳಿಯ ಅಪರ ನಿರ್ದೇಶಕರುಗಳಾಗಿ ಹಾಗೂ ಇತರೆ ಸಿಬ್ಬಂದಿ ವರ್ಗಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಮಿಷನ್ ಮೂಲಕ ಮೇಲಿನ ಕಾರ್ಯಕ್ರಮದ ಮೇಲ್ವಿಚಾರಣೆ, ತರಬೇತಿ, ಉಪಕರಣಗಳ ಪೂರೈಕೆ, ಸಿಬ್ಬಂದಿಗಳ ಪೂರೈಕೆ ಹಾಗೂ ಜನರಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

ಈ ಮೇಲಿನ ವೆಚ್ಚವನ್ನು 2012–13ನೇ ಸಾಲಿನ ಲೆಕ್ಕ ಶೀರ್ಷಿಕೆ ಸಂಖ್ಯೆ "2052–00–090–0–26–051 ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಅನುಷ್ಠಾನ" ನಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 236 ವೆಚ್ಚ–12/2012 ದಿನಾಂಕ: 01/03/2012ರಲ್ಲಿ ಸಹಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಜಿ. ಶಶಿಕಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಆಸು–ನಾಗರೀಕ ಸೇವೆಗಳು)

ಪಿ.ಆರ್. 865

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಗೌರವಧನದ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ Law Clerks-cum-Research Assistants ಹುದ್ದೆಗಳನ್ನು ದಿನಾಂಕ: 01–02–2012 ರಿಂದ ಮುಂದಿನ ಎರಡು ವರ್ಷಗಳವರೆಗೆ ಮುಂದುವರೆಸಲು ಮಂಜೂರಾತಿ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 29 ಸೇಉನ್ಯಾ 2006 ದಿನಾಂಕ: 12–4–2006.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸೇಉನ್ಯಾ, 2006 ದಿನಾಂಕ: 25–1–2007,
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸೇಉನ್ಯಾ 2008 ದಿನಾಂಕ: 5–2–2008.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸೇಉನ್ಯಾ 2009 ದಿನಾಂಕ: 9–2–2009.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಉನ್ಯಾ 2011 ದಿನಾಂಕ: 25–03–2011.
6) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಅವರ ಪತ್ರ ಸಂಖ್ಯೆ: HCE 623/2006 dated 03-12-2011

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 12–4–2006ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಕಾನೂನು ಪದವೀಧರರನ್ನು ರೂ. 6000–00 ಗಳ ಮಾಸಿಕ ಗೌರವಧನದ ಆಧಾರದ ಮೇಲೆ Law Clerks-cum-Research Assistants ಗಳಾಗಿ 1 ವರ್ಷದ ಅವಧಿಗೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಆನಂತರ ಮೇಲೆ (2) ರಲ್ಲಿ ಓದಲಾದ ದಿನಾಂಕ: 25–1–2007ರ ಸರ್ಕಾರಿ ಆದೇಶದಲ್ಲಿ ಸದರಿ ಗೌರವಧನವನ್ನು ರೂ. 10,000–00 ಗಳಿಗೆ ಹೆಚ್ಚಿಸಲಾಗಿತ್ತು ಸದರಿ ಹುದ್ದೆಗಳನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ: 5–2–2008ರ ಸರ್ಕಾರಿ ಆದೇಶದಲ್ಲಿ ದಿನಾಂಕ: 1–2–2008 ರಿಂದ 1 ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ತದನಂತರ ಸದರಿ ಹುದ್ದೆಗಳನ್ನು ಮೇಲೆ (4) ರಲ್ಲಿ ಓದಲಾದ ದಿನಾಂಕ: 9–2–2009ರ ಸರ್ಕಾರಿ ಆದೇಶದಲ್ಲಿ ದಿನಾಂಕ: 1–2–2009 ರಿಂದ 31–1–2010ರ ವರೆಗೆ ಮುಂದುವರೆಸಲಾಗಿತ್ತು. ಮೇಲೆ (5) ರಲ್ಲಿ ಓದಲಾದ ಆದೇಶದಂತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ರವರು ಮೇಲೆ (6) ರಲ್ಲಿ ಓದಲಾದ ದಿನಾಂಕ: 03–12–2011ರ ಪತ್ರದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 01–12–2012 ರಿಂದ ಮುಂದಿನ ಎರಡು ವರ್ಷಗಳವರೆಗೆ ಮುಂದುವರೆಸಲು ಹಾಗೂ ಅಗತ್ಯ ಅನುದಾನ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 80 ಸೇಉನ್ಯಾ 2011, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2012**

ಕರ್ನಾಟಕ ಉಚ್ಚ ನ್ಯಾಯಾಲಯದ Law Clerks-cum-Research Assistants 41 ಹುದ್ದೆಗಳನ್ನು ದಿನಾಂಕ: 01–02–2012 ರಿಂದ ಮತ್ತೆ ಎರಡು ವರ್ಷಗಳ ಕಾಲ ವಿಸ್ತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1140 ವೆಚ್ಚ–12/2011 ದಿನಾಂಕ: 10–01–2012 ಮತ್ತು ಟಿಪ್ಪಣಿ ಸಂಖ್ಯೆ: ಆಇ 116 ವೆಚ್ಚ–12 ದಿನಾಂಕ: 21–02–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 866

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಂಥಾಲಯದ ವಿಕಾಸ ಸೌಧ ಶಾಖೆಯಲ್ಲಿನ ಮುಖ್ಯ ಗ್ರಂಥಾಧಿಕಾರಿ ಹುದ್ದೆಯ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 530 ಸಅಸೇ 2010; ದಿನಾಂಕ: 15.12.2010.
2) ಸಚಿವಾಲಯ ಗ್ರಂಥಾಲಯ (ವಿಕಾಸ ಸೌಧ ಶಾಖೆ)ಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 56 ಸಗ್ರಿ 2011, ದಿನಾಂಕ: 12.10.2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ಗ್ರಂಥಾಲಯದ ವಿಕಾಸ ಸೌಧ ಶಾಖೆಯ ಉಪ ಗ್ರಂಥಾಧಿಕಾರಿ ಹುದ್ದೆಯನ್ನು ಮುಖ್ಯ ಗ್ರಂಥಾಧಿಕಾರಿ ಹುದ್ದೆಗೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಉನ್ನತೀಕರಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸಚಿವಾಲಯ ಗ್ರಂಥಾಲಯ (ವಿಕಾಸ ಸೌಧ ಶಾಖೆ)ಯ ಅನಧಿಕೃತ ಟಿಪ್ಪಣಿಯಲ್ಲಿ ಸಚಿವಾಲಯ ಗ್ರಂಥಾಲಯ (ವಿಕಾಸ ಸೌಧ ಶಾಖೆ)ಯ ಮುಖ್ಯ ಗ್ರಂಥಾಧಿಕಾರಿಯ ಹುದ್ದೆಯನ್ನು ದಿನಾಂಕ: 15–12–2011ರಿಂದ ಎರಡು ವರ್ಷಗಳ ಅವಧಿಯವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 568 ಸಅಸೇ 2011, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2012**

ಕರ್ನಾಟಕ ಸರ್ಕಾರದ ಸಚಿವಾಲಯ ಗ್ರಂಥಾಲಯದ (ವಿಕಾಸ ಸೌಧ ಶಾಖೆ)ಯ ಮುಖ್ಯ ಗ್ರಂಥಾಧಿಕಾರಿಯ ಹುದ್ದೆಯನ್ನು ದಿನಾಂಕ: 15–12–2011 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 35 ಸೇ–3/12, ದಿನಾಂಕ: 02–02–2012 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್. 867

## DEPARTMENT OF PERSONNEL AND ADMINISTRATIVE REFORMS SECRETARIAT

Sub:- Deputation of Officers to Berlin, Germany – Issue of orders-Reg.

Read : File No.FEE 4 ENG 2012, from the Forest, Ecology and Environment Department.

**PREAMBLE :**

The Forest, Ecology and Environment Department vide its file read above has sent a proposal for the deputation of Sri. Kaushik Mukherjee, IAS, Additional Chief Secretary to Government, Forest, Ecology and Environment Department, Bangalore and Sri. Kanwerpal, IFS, Secretary to Government (Ecology & Environment), Forest, Ecology and Environment Department, and Sri. Sadashivaiah, Chairman, Karnataka State Pollution Control Board, Bangalore to Visit to Berlin and other Cities of Germany to attend the programme on "Co-finance cooperation between the Government of Karnataka and GIZ and for holding high level meeting with German partners on innovative environmental policies" from 16-04-2012 to 23-04-2012.

It is reported that this delegation will take the opportunity to meet the exports from GIZ and representative of various environmental agencies in Germany in order to exchange experiences on latest development on environmental policies and regulations.

The State Government has examined the proposal and has decided to depute Sri. Kaushik Mukherjee, IAS, and Sri Kanwerpal, IFS, Accordingly the following orders are issued.

**GOVERNMENT ORDER No.DPAR 66 SME 2012, BANGALORE, DATED:06-03-2012**

Sanction is accorded for the deputation of Sri. Kaushik Mukherjee, IAS, Additional Chief Secretary to Government, Forest, Ecology and Environment Department, Bangalore and Sri. Kanwerpal, IFS, Secretary to Government (Ecology & Environment), Forest, Ecology and Environment Department, Bangalore to Berlin and other Cities of Germany to attend the programme on "Co-finance cooperation between the Government of Karnataka and GIZ and for holding high level meeting with German partners on innovative environmental policies" from 16-04-2012 to 23-04-2012.

The deputation will be subject to the following conditions.

1. The period of deputation including the time reasonably required for the to and fro journey shall be treated as on duty for all purposes.
2. Karnataka State Pollution Control Board will meet the entire expenditure in this connection.
3. The officers shall not accept any foreign hospitality during their visit to Berlin, Germany.
4. The officers are entitled to draw Airfare DA, Hotel rentals, Local transport in Berlin, Germany, Airport tax, Visa charges and costs involved in obtaining Medical certificates, if any, as per G.O.FD 03 SRA 2011, dated 17-12-2011.
5. The officers shall send a report within 15 days from the date of his return from abroad.

BY ORDER AND IN THE NAME OF THE GOVERNOR OF KARNATAKA
**U.H. Narayanaswamy**
Under Secretary to Government
DPAR (Services-1)

P.R.868

## ಜಲಸಂಪನ್ಮೂಲ ಸಚಿವಾಲಯ

ವಿಷಯ : ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಹೊಸಂಗಡಿ ಗ್ರಾಮದ ಬಲ್ಲಂಗೇರಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

ಓದಲಾಗಿದೆ : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5–ಸ.ಇಂ.–11/ದ.ಕ.ಜಿ./ಬೆ.ತಾ./ಬಲ್ಲಂಗೇರಿ/ಇಪ್ರೊಕ್ಯೂರ್‌ಮೆಂಟ್/ಟೆಂಡರ್ ಅನುಮೋದನೆ/2011/775, ದಿನಾಂಕ:24–02–2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಹೊಸಂಗಡಿ ಗ್ರಾಮದ ಬಲ್ಲಂಗೇರಿ ಎಂಬಲ್ಲಿ, ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ.26.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| 1. | ಅಶೋಕ್ ಎಸ್. ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು | 214,27,222/– | 13.926 ಹೆಚ್ಚು |
| 2 | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 245,01,197/– | 30.27 ಹೆಚ್ಚು |

ಮೇಲ್ಕಂಡ ಶ್ರೀ ಅಶೋಕ್ ಎಸ್.ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 13.926 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 13.25% ಹೆಚ್ಚಿನ ದರಗಳಿಗೆ ಅಂದರೆ ರೂ. 213,00,032/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 33 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ 07–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಕಲ್ಮಾಡಿ ಗ್ರಾಮದ ಕಲ್ಮಾಡಿ ಬೊಬ್ಬರ್ಯ ಮತ್ತು ಬಾಪು ತೋಟ ನಡುವೆ ಉಪ್ಪು ನೀರು ತಡೆ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 188,07,975/– ಮೇಲೆ ಶೇ. 13.25 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 213,00,032/–ಗಳಿಗೆ (ರೂ. ಎರಡು ಕೋಟಿ ಹದಿಮೂರು ಲಕ್ಷ ಮೂವತ್ತೆರಡು ರೂಪಾಯಿಗಳು ಮಾತ್ರ) ಶ್ರೀ ಅಶೋಕ್ ಎಸ್. ಶೆಟ್ಟಿ 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 883

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ನಾವಲಗಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
**1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಾಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಇ–6/2011–12/753 ದಿನಾಂಕ : 08–02–2012.
**2.** ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009 ದಿನಾಂಕ: 05–02–2009.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ನಾವಲಗಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ್‌ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾಟೆಂಡರ್ ಬುಲೆಟಿನ್ | 09–12–2011 |
| ಪ್ರಜಾವಣಿ ಕನ್ನಡ ದಿನ ಪತ್ರಿಕೆ | 02–12–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 32,91,425/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.40,57,244/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಡಿ. ಎಂ.ತೋಟದ, ಒಂದನೇ ದರ್ಜೆ ಗುತ್ತಿಗೆದಾರರು | 45,06,474 | 36.92 ಹೆಚ್ಚು | 11.07 ಹೆಚ್ಚು |

ಮೇಲ್ಕಂಡಂತೆ ಶ್ರೀ ಡಿ.ಎಂ. ತೋಟದ, 1ನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳನ್ನು ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.07 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 40,57,244/-ಗಳ ಮೇಲೆ ಶೇ. 10.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 44,83,255/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ಹೊಕೆನಿ 2012 (ತಾಂತ್ರಿಕ) ಬೆಂಗಳೂರು, ದಿನಾಂಕ 07-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕಿನ ನಾವಲಗಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 40,57,244/-ಗಳ ಮೇಲೆ ಶೇ. 10.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 44,83,255/-ಗಳಿಗೆ (ರೂ. ನಲವತ್ತ ನಾಲ್ಕು ಲಕ್ಷ ಎಂಬತ್ತೂರು ಸಾವಿರದ ಇನ್ನೂರ ಐವತ್ತೈದು ಮಾತ್ರ)ಗಳಿಗೆ ಶ್ರೀ ಡಿ.ಎಂ.ತೋಟದ, 1ನೇ ದರ್ಜೆ ಗುತ್ತಿಗೆದಾರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 884

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಕೆರೂರ ಗ್ರಾಮದ ಹತ್ತಿರ ಅಮೀನಪ್ಪ ಅಮಗೊಂಡ ಮಾದರರವರ ಸರ್ವೆ ನಂ. 129 ಹಾಗೂ ಇತರರ ಜಮೀನುಗಳಿಗೆ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ-9/ಕೆರೂರ ಏ.ನೀ.ಯೋ.(ಎಸ್.ಸಿ.ಪಿ.)2011-12/1144 ದಿನಾಂಕ:29-02-2012.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಕೆರೂರ ಗ್ರಾಮದ ಹತ್ತಿರ ಅಮೀನಪ್ಪ ಅಮಗೊಂಡ ಮಾದರರವರ ಸರ್ವೆ ನಂ. 129 ಹಾಗೂ ಇತರರ ಜಮೀನುಗಳಿಗೆ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿ ಅಂದಾಜಿಗೆ ವಿಶೇಷ ಘಟಕ ಯೋಜನೆ ಕಾರ್ಯಕ್ರಮದಡಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾಟೆಂಡರ್ ಬುಲೆಟಿನ್ | 09-01-2012 |
| ವಿಜಯ ಕರ್ನಾಟಕ ದಿನ ಪತ್ರಿಕೆ | 03-01-2012 |
| ಇಂಡಿಯನ್ ಎಕ್ಸ್‌ಪ್ರೆಸ್ ಆಂಗ್ಲ ದಿನ ಪತ್ರಿಕೆ | 03-01-2012 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.46,08,775/- |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಎಚ್.ಆರ್. ಚಿಂಚಲಿ ಒಂದನೇ ದರ್ಜೆ ಗುತ್ತಿಗೆದಾರರು | 54,13,919/- | 17.47 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಚ್.ಆರ್. ಚಿಂಚಲಿ, 1ನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳನ್ನು ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.47 ರಷ್ಟು

ಹೆಚ್ಚಾಗಿದ್ದು. ಸದರಿವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 46,08,775/–ಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 52,77,047/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಏನೀಯೋ 2012 (ತಾಂತ್ರಿಕ) ಬೆಂಗಳೂರು, ದಿನಾಂಕ 07–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕಿನ ಕೆರೂರ ಗ್ರಾಮದ ಹತ್ತಿರ ಅಮೀನಪ್ಪ ಅಮಗೊಂಡ ಮಾದರವರ ಸರ್ವೆ ನಂ. 129 ಹಾಗೂ ಇತರರ ಜಮೀನುಗಳಿಗೆ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 46,08,775/–ಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 52,77,047/–ಗಳಿಗೆ (ರೂ. ಐವತ್ತೆರಡು ಲಕ್ಷ ಎಪ್ಪತ್ತೇಳು ಸಾವಿರದ ನಲವತ್ತೇಳು ಮಾತ್ರ)ಗಳಿಗೆ ಶ್ರೀ ಎಚ್.ಆರ್. ಚಿಂಚಲಿ, 1ನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 885 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ ಟಿ. ನರಸೀಪುರ ತಾ. ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಉಲ್ಲೇಖ :** 1)ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)ಎಂ–29/ಸಿಆರ್–5/2011, ಮೈಸೂರು ದಿ: 05–11–2011.

2) ತನಿಖಾಧಿಕಾರಿಯವರ ಅಂತಿಮ ವರದಿ ದಿ: 15–10–2011.

3) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ಪತ್ರ, ಪ್ರಾಯೋಗಿಕ ಪಂಚನಾಮೆ, ಹಣ ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ದಾಖಲೆಗಳು.

**ಪ್ರಸ್ತಾವನೆ :**

ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ.ನರಸೀಪುರ ತಾ. ಇವರ ವಿರುದ್ಧ ಗುನ್ನೆ ಸಂಖ್ಯೆ: 05/2011 ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಮೇಲೆ ಓದಲಾದ–2, 3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 05–11–2011 (ಮೇಲೆ ಓದಲಾದ–1) ರೊಡನೆ ಕಳುಹಿಸುತ್ತಾ, ಅಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988 ರ ಕಲಂ 19(1)(ಬಿ) ರ ಅನ್ವಯ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಎಂ–29/ಸಿಆರ್–5/2011, ಮೈಸೂರು, ದಿನಾಂಕ: 05–11–2011 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಎನ್. ಹನುಮಯ್ಯ ಬಿನ್ ನಂಜಯ್ಯ, 51 ವರ್ಷ, ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪ್ರೌಢ ಶಾಲಾ ವಿಭಾಗ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಇವರ ಫಿರ್ಯಾದಿ ದಿನಾಂಕ: 07–05–2011.
2. ಪ್ರಥಮ ವರ್ತಮಾನ ವರದಿ, ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 05/2011.
3. ಪ್ರಾಯೋಗಿಕ ಪಂಚನಾಮೆ (ಎಂಪ್ರಸ್ಟ್‌ಮೆಂಟ್ ಮಹಜರ್) ದಿನಾಂಕ: 07–05–2011.
4. ಹಣ ಜಪ್ತಿ ಪಂಚನಾಮೆ (ಟ್ರ್ಯಾಪ್ ಮಹಜರ) ದಿನಾಂಕ: 07–05–2011.
5. ರಾಸಾಯನಿಕ ಪರೀಕ್ಷಕರ ವಿಶ್ಲೇಷಣಾ ವರದಿ ಪತ್ರ ನಂ. ಪಿಹೆಚ್‌ಐ/ಸಿಎಂಇ/ಎಲ್‌ಓಕೆ/24/11–12, ದಿನಾಂಕ: 21/05/2011.
6. ಕೃತ್ಯ ನಡೆದ ಸ್ಥಳದ ನಕಾಶೆ

7) ಸಾಕ್ಷಿಗಳ ಹೇಳಿಕೆಗಳು:

1. ಶ್ರೀ ಎನ್. ಹನುಮಯ್ಯ, ಬಿನ್ ನಂಜಯ್ಯ, 51 ವರ್ಷ, ಉಪ ಪ್ರಾಂಶುಪಾಲರು ಸರ್ಕಾರಿ ಪದವಿ ಪೂರ್ವ ಕಾಲೇಜು, ಪ್ರೌಢ ಶಾಲಾ ವಿಭಾಗ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ – (ಫಿರ್ಯಾದಿ)

2. ಶ್ರೀಮತಿ ಜೆ.ಎಂ. ಜಯಲಕ್ಷ್ಮಿ ಕೋಂ ಜಗದೀಶ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಉಪ ನಿಬಂಧಕರುಗಳ ಕಛೇರಿ, ಸಾರ್ವಜನಿಕ ಕಛೇರಿಗಳ ಕಟ್ಟಡ, ಪೋರ್ಟ್ ಮಹಲ್ಲಾ, ಮೈಸೂರು ಪಂಚ–1
3. ಶ್ರೀ. ಎಂ. ಎನ್. ರಾಜಶೇಖರ ಮೂರ್ತಿ, ಬಿ ಲೇಟ್ ನಾಗರಾಜು, ಎಸ್.ಡಿ.ಎ. ಸಹಕಾರ ಸಂಘಗಳ ಉಪ ನಿಬಂಧಕರುಗಳ ಕಛೇರಿ, ಸಾರ್ವಜನಿಕ ಕಛೇರಿಗಳ ಕಟ್ಟಡ, ಪೋರ್ಟ್ ಮೊಹಲ್ಲಾ, ಮೈಸೂರು, ಪಂಚ–2
4. ಶ್ರೀ ಎಂ.ಎಸ್. ಕೃಷ್ಣಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ.ರವರ ಕಛೇರಿ, ಟಿ. ನರಸೀಪುರ ತಾಲ್ಲೂಕು, ಟಿ ನರಸೀಪುರ.
5. ಶ್ರೀ ಎಲ್. ಸಿದ್ಧಪ್ಪ, ಡಿ.ಗ್ರೂಪ್ ನೌಕರ, ಬಿ.ಇ.ಓ. ರವರ ಕಛೇರಿ, ಟಿ. ನರಸೀಪುರ ತಾಲ್ಲೂಕು, ಟಿ. ನರಸೀಪುರ.
6. ಶ್ರೀಮತಿ ಪಿ. ಲತಾ, ಕಿರಿಯ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಟಿ. ನರಸೀಪುರ ತಾಲ್ಲೂಕು ಟಿ. ನರಸೀಪುರ.
7. ಕುಮಾರಿ ಎಸ್. ಮಹಾಲಕ್ಷ್ಮಿ ಬಿನ್ ಲೇಟ್ ಎಂ. ಶಿವರುದ್ರಯ್ಯ 23 ವರ್ಷ, ಎಸ್.ಡಿ.ಎ. ಕ್ಷೇತ್ರ ಶಿಕ್ಷಣಾಧಿಕರಿಗಳ ಕಛೇರಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ.
8. ಶ್ರೀ ಹೆಚ್.ಎಂ. ಶಂಕರ ಬಿನ್ ಲೇಟ್ ಮರಿಸ್ವಾಮಿ, 40 ವರ್ಷ, ಶಿಕ್ಷಣ ಸಂಯೋಜಕರು, ಕ್ಷೇತ್ರ ಶಿಕ್ಷಣಾಧಿಕರಿಗಳ ಕಛೇರಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ.
9. ಶ್ರೀಮತಿ ಎ. ಸಲೀನಾ ಕುಮಾರಿ, ಕೋಂ ಜೆ.ಡೆನಿಸನ್ ಚಂದ್ರಶೇಖರ್, 51 ವರ್ಷ, ಸಹ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಮುಸುವಿನ ಕೊಪ್ಪಲು, ಟಿ. ನರಸೀಪುರ ತಾಲ್ಲೂಕು.
10. ಶ್ರೀಮತಿ ಐಗ್ರೇಸ್ ಪ್ರೇಮಕುಮಾರಿ, ಕೋ ಟಿ. ಆಂಜನೇಯ, 42 ವರ್ಷ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಚಿದರವಳ್ಳಿ, ಟಿ. ನರಸೀಪುರ ತಾಲ್ಲೂಕು.
11. ಶ್ರೀ ಟಿ.ಜೆ. ಆನಂದ್ ಬಿನ್ ಎಸ್. ಜವರಯ್ಯ, 41 ವರ್ಷ, ಸಹಾಯಕ ನಿರ್ದೇಶಕರು, ಅಕ್ಷರ ದಾಸೋಹ ತಾಲ್ಲೂಕು ಪಂಚಾಯತಿ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಟಿ. ನರಸೀಪುರ ತಾಲ್ಲೂಕು.
12. ಶ್ರೀ ಎಸ್.ಇ. ಡಿಸೋಜ, ಅಧೀಕ್ಷಕರು, ಮೈಸೂರು ವಿಭಾಗ, ಮೈಸೂರು.
13. ಶ್ರೀ ಜಿ. ಗೋಪಾಲಕೃಷ್ಣ, ಪೊಲೀಸ್ ನಿರೀಕ್ಷಕರು ಮೈಸೂರು ಲೋಕಾಯುಕ್ತ ಠಾಣೆ, ಮೈಸೂರು.
14. ಶ್ರೀ ಎಂ.ಬಿ. ದಿಲೀಪ್, ಸಿ.ಪಿ.ಸಿ. ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
15. ಶ್ರೀ ರೇವಣ್ಣ, ಸಿಹೆಚ್‌ಸಿ, ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
16. ಶ್ರೀ ವೀರಭದ್ರ ಸ್ವಾಮಿ, ಸಿ.ಪಿ.ಸಿ. ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
17. ಶ್ರೀ ಆರ್. ರಮೇಶ್, ಸಿ.ಪಿ.ಸಿ. ಮೈಸೂರು ಲೋಕಾಯುಕ್ತ ಠಾಣೆ, ಮೈಸೂರು.
18. ಶ್ರೀಮತಿ ದಾಕ್ಷಾಯಿಣಿ, ಮ.ಪಿ.ಸಿ. ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
19. ಶ್ರೀಮತಿ ಎಂ.ಕೆ. ಭಾರತಿ, ಮ.ಹೆಚ್.ಸಿ., ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
20. ಶ್ರೀ ಎ.ವಿ. ಕೃಷ್ಣಮೂರ್ತಿ, ಸಿ.ಹೆಚ್.ಸಿ. ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
21. ಶ್ರೀ ಎಲ್. ಸುರೇಶ್, ಎ.ಪಿ.ಸಿ. ಚಾಮರಾಜನಗರ ಲೋಕಾಯುಕ್ತ ಠಾಣೆ, ಮೈಸೂರು.
22. ಶ್ರೀ ಆನಂದರಾವ್ ಸಿಂಧ್ಯ, ಎ.ಪಿ.ಸಿ. ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
23. ಶ್ರೀ. ಎ. ಷಬ್ಬೀರ್ ಅಹಮದ್, ಸಿ.ಪಿ.ಸಿ, ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
24. ಶ್ರೀ ಆರ್. ಪಾಂಡುರಂಗ, ಸಿ.ಹೆಚ್.ಸಿ. ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
25. ಶ್ರೀಮತಿ, ಅಮ್ಮಾಜಾನ್, ಮ.ಹೆಚ್.ಸಿ, ಮೈಸೂರು, ಲೋಕಾಯುಕ್ತ ಠಾಣೆ, ಮೈಸೂರು.
26. ಶ್ರೀ ಬಸವರಾಜು ಗೋವಿನ ಗಿಡದ್, ಸಹಾಯ ಕೆಮಿಕಲ್ ಎಗ್ಸಾಮಿನರ್, ಪಬ್ಲಿಕ್ ಹೆಲ್ತ್ ಇನ್ಸ್‌ಟಿಟ್ಯೂಟ್, ಬೆಂಗಳೂರು.
27. ಶ್ರೀ ವಿಕ್ಟರ್ ಸೈಮನ್, ನೀರಿಕ್ಷಕರು, ಕರ್ನಾಟಕ ಲೋಕಾಯುಕ್ತ ಠಾಣೆ, ಮೈಸೂರು.

8) ಲಂಚ ಕೇಳಲು ಆಧಾರವಾದ ಕಡತ:– ಫಿರ್ಯಾಧಿದಾರ ಶ್ರೀ ಎನ್. ಹನುಮಯ್ಯ, ಬಿನ್ ನಂಜಯ್ಯ, 51 ವರ್ಷ, ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪ್ರೌಢ ಶಾಲಾ ವಿಭಾಗ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಇವರಿಗೆ 2010–11ನೇ ಸಾಲಿನ ಕಛೇರಿ ನಿರ್ವಹಣಾ ಸಾದಿಲ್ವಾರು ವೆಚ್ಚಕ್ಕಾಗಿ ರೂ. 11,000/–ಗಳನ್ನು ಉಪ ನಿರ್ದೇಶಕರ ಮುಖಾಂತರ ಸರ್ಕಾರದಿಂದ ಮಂಜೂರಾಗಿ ಹಣ ಬಿಡುಗಡೆಯಾಗಿರುತ್ತದೆ. ಆ ಹಣದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಜಿ. ಮಹದೇವಮ್ಮ ರವರು ರೂ. 2,000/–ಗಳನ್ನು ಲಂಚವಾಗಿ ಕೊಡಬೇಕೆಂದು ಒತ್ತಾಯ ಮಾಡಿರುತ್ತಾರೆ. ಸದರಿಯವರು ಹಲವಾರು ಬಾರಿ ಎಲ್ಲಾ ಮುಖ್ಯ ಶಿಕ್ಷಕರುಗಳು ರೂ. 2,000 ಕೊಟ್ಟಿರುತ್ತಾರೆ. ನೀವು ಮಾತ್ರ ಕೊಟ್ಟಿಲ್ಲ, ಕೊಡಿ ಎಂದು ಒತ್ತಾಯ ಮಾಡಿರುತ್ತಾರೆ. ಫಿರ್ಯಾದುದಾರರಿಗೆ ಲಂಚದ ಹಣ ಕೊಡಲು ಇಷ್ಟವಿಲ್ಲದ ಕಾರಣ ದಿನಾಂಕ: 26–04–2011ರಂದು ಮೈಸೂರು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಗೆ ಭೇಟಿ ನೀಡಿ ದೂರು ನೀಡಿರುತ್ತಾರೆ.

9) ಆಪಾದಿತರ ಸಮಜಾಯಿಷಿ ಹೇಳಿಕೆ ದಿನಾಂಕ: 07–05–2011: – ದಿನಾಂಕ: 01–04–2011 ರಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಗಳು ಪ್ರಾರಂಭವಾಗಿದ್ದು, ಶ್ರೀ ಹನುಮಯ್ಯ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಟಿ. ನರಸೀಪುರ ರವರು ಕೂಡ ಜಾಗೃತ ದಳದಲ್ಲಿ ನನ್ನ ಜೊತೆ ಇದ್ದರು. ಅವರು ಸಂಬಳ ಆಗಿಲ್ಲ ತೊಂದರೆ ಇದೆ, ನನಗೆ ರೂ. 2,000/– ಗಳು ಬೇಕೆಂದು ಸಾಲ ಕೇಳಿದರು. ಪ್ರಶ್ನೆ

ಪತ್ರಿಕೆಗಳನ್ನು ವಿತರಣೆ ಮಾಡಿ ನನ್ನ ಕೊಠಡಿಗೆ ಬಂದು ಅವರಿಗೆ 2,000 ರೂ. ಗಳನ್ನು ನೀಡಲಾಯಿತು. ಹಣ ನೀಡುವಾಗ ಶ್ರೀ ಚಂದ್ರಪ್ರಕಾಶ್, ಸ.ಶಿ., ಸ.ಹಿ. ಪ್ರಾ ಶಾಲೆ, ಹೆಗ್ಗೂರು, "ಎ" ಶಾಲೆ, ಇವರೂ ಕೂಡ ಹಾಜರಿದ್ದರು. ಅವರ ಸಮುಖದಲ್ಲಿ ನೀಡಿರುತ್ತೇನೆ. ನಂತರ ಎಸ್.ಎಸ್.ಎಲ್.ಸಿ ಮೌಲ್ಯಮಾಪನಕ್ಕೆ ಹೊರಟುಹೋದರು. ಹಿಂದಿರುಗಿಬಂದ ನಂತರ ರೂ. 1,000 ಕೊಟ್ಟಿದ್ದರು. ಮೌಲ್ಯಮಾಪನದ ಚೆಕ್‌ನ್ನು ಬ್ಯಾಂಕಿಗೆ ಹಾಕಿರುತ್ತೇನೆ. ಜಮಾ ಆದ ನಂತರ ಉಳಿದ ಹಣ ನೀಡುವುದಾಗಿ ತಿಳಿಸಿದರು. ದಿ: 07-05-2011 ರಂದು ಫಿರ್ಯಾದುದಾರರು ಕಛೇರಿಗೆ ಬಂದಿದ್ದರು. ಆ ಸಂದರ್ಭದಲ್ಲಿ ಹಣ ಕೇಳಿದಾಗ ನೀಡಿರುತ್ತಾರೆಂದು ಬರೆದುಕೊಟ್ಟಿರುತ್ತಾರೆ.

ತನಿಖಾಧಿಕಾರಿಗಳಾದ ಶ್ರೀ ವಿಕ್ಟರ್ ಸೈಮನ್, ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಮೈಸೂರು ಇವರು ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾ. ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಪೊಲೀಸ್, ಮೈಸೂರು ಠಾಣೆಯಲ್ಲಿ ಮೊ. ಸಂಖ್ಯೆ: 05/2011 ರಲ್ಲಿ ಲಂಚ ಪ್ರತಿಬಂಧಕ ಕಾಯ್ದೆ 1988ರ ಕಲಂ-7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿರುತ್ತಾರೆ.

ಆಪಾದಿತರಾದ ಶ್ರೀಮತಿ ಜಿ. ಮಹದೇವಮ್ಮ ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾ. ಇವರು ಫಿರ್ಯಾದಿದಾರ ಶ್ರೀ ಎನ್. ಹನುಮಯ್ಯ, ಬಿನ್ ನಂಜಯ್ಯ, 51 ವರ್ಷ ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪ್ರೌಢ ಶಾಲಾ ವಿಭಾಗ ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ. ಇವರಿಂದ 2010-11ನೇ ಸಾಲಿನ ಕಛೇರಿ ನಿರ್ವಹಣಾ ಸಾದಿಲ್ವಾರು ವೆಚ್ಚಕ್ಕಾಗಿ ರೂ. 11,000/- ಗಳನ್ನು ಉಪ ನಿರ್ದೇಶಕರ ಮುಖಾಂತರ ಸರ್ಕಾರದಿಂದ ಮಂಜೂರಾಗಿ ಹಣ ಬಿಡುಗಡೆಯಾಗಿರುತ್ತದೆ. ಆ ಹಣದಲ್ಲಿ ರೂ. 2,000/-ಗಳನ್ನು ಲಂಚವಾಗಿ ಕೊಡಬೇಕೆಂದು ಒತ್ತಾಯ ಮಾಡಿರುತ್ತಾರೆ. ತಮ್ಮ ಸ್ವಂತಕ್ಕೆ ರೂ. 1,000/-ಗಳನ್ನು ಲಂಚದ ಹಣ ನೀಡುವಂತೆ ಕೇಳಿ ಅಂದೇ ದಿನಾಂಕ: 07-05-2011 ರಂದು ಸಂಜೆ 6-05 ಗಂಟೆಯ ಸುಮಾರಿಗೆ ಟಿ. ನರಸೀಪುರ ತಾಲ್ಲೂಕು ಬಿ.ಇ.ಓ. ಕಛೇರಿಯಲಿ, ಆಪಾದಿತ ಅಧಿಕಾರಿಯು ನೆರಳು ಸಾಕ್ಷಿ ಪಂಚ ನಂ. ಶ್ರೀ ಎಂ.ಎನ್. ರಾಜಶೇಖರ್ ಮೂರ್ತಿ ಇವರು ನೋಡುತ್ತಿದ್ದಂತೆ ಫಿರ್ಯಾದಿದಾರ ಶ್ರೀ ಹನುಮಯ್ಯ ಇವರಿಂದ ಲಂಚದ ಹಣ ರೂ. 1,000/- ಗಳನ್ನು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 1,000/-ಗಳನ್ನು ಫಿರ್ಯಾದುದಾರರಿಂದ ಒತ್ತಾಯಿಸಿ ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾ. ಇವರು ತಮ್ಮ ಕಛೇರಿಯಲ್ಲಿ ಲಂಚದ ಹಣವನ್ನು ಬಲಗೈಯಲ್ಲಿ ಪಡೆದುಕೊಂಡು ಅವರ ಟೇಬಲ್ ಮೇಲಿಟ್ಟಿದ್ದ ವ್ಯಾನಿಟಿ ಬ್ಯಾಗ್‌ನಲ್ಲಿ ಇಟ್ಟುಕೊಂಡಿದ್ದ ಹಣವನ್ನು ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ರ ಕಲಂ-7 13(1)(ಡಿ) ಜೊತೆಗೆ ಓದಲಾದ 13(2) ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ-7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ವಜಾ ಮಾಡುವ ಅಧಿಕಾರವನ್ನು ಹೊಂದಿದ್ದು, ಲಂಚ ನಿರೋಧಕ ಕಾಯ್ದೆ 1988ರ ಕಲಂ-19(1)(ಬಿ)ರ ಅಡಿ ಆಪಾದಿತ ನೌಕರರಾದ ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾ. ಇವರನ್ನು ಕಲಂ-7, 13(1)ಡಿ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಂಡಾರ್ಹ ಅಪರಾಧ ಎಸಗಿರುವುದರಿಂದ ಸದರಿಯವರನ್ನು ಕಲಂ-19(1)(ಬಿ) ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭೀಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 19 ಡಿಜಿಓ 2011, ಬೆಂಗಳೂರು, ದಿನಾಂಕ 07ನೇ ಮಾರ್ಚ್-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಆರೋಪಿಯಾದ ಶ್ರೀಮತಿ ಜಿ. ಮಹದೇವಮ್ಮ, ಕ್ಷೇತ್ರ ಶಿಕ್ಷಣಾಧಿಕಾರಿ, ಟಿ. ನರಸೀಪುರ ತಾ. ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ-7, 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ದೃಢಪಟ್ಟಿರುವುದರಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾಗುವ ಎಲ್ಲಾ ಆದೇಶಗಳನ್ನು ಅಥವಾ ಅಧಿಸೂಚನೆಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕಿರುತ್ತದೆ.

ಸದರಿ ನಿಯಮಾವಳಿಯ ನಿಯಮ-19(1)(ಬಿ)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿರುವ ಆದೇಶಗಳು ಮತ್ತು ಅಧಿಸೂಚನೆಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಈ ಮೇಲ್ಕಂಡ ಆದೇಶವನ್ನು ಸರ್ಕಾರದ ಪರವಾಗಿ ಕಚೇರಿಯ ಮೊಹರು ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿಯ ಸಹಿಯ ಅಡಿಯಲ್ಲಿ ದಿನಾಂಕ:07-03-2012 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 886 ಶಿಕ್ಷಣ ಇಲಾಖೆ (ಆಡಳಿತ ಮತ್ತು ಸಮಿತಿಗಳು)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅತೀ ಕಡಿಮೆ ತೂಕವುಳ್ಳ ಮಕ್ಕಳಿಗೆ ಹಾಲು ಮತ್ತು ಮೊಟ್ಟೆಯನ್ನು ವಿತರಿಸಲು ಮಂಜೂರಾತಿ ನೀಡುವ ಕುರಿತು.

**ಉಲ್ಲೇಖ :** ದಿನಾಂಕ: 23-01-2012 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಪ್ರಸ್ತಾವನೆ ಸಂಖ್ಯೆ: ಮಮಇ: ಸಶಿಯೋ: ಆಕಇವಿ: 19-11-2012.

**ಪ್ರಸ್ತಾವನೆ :**

ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯು ಪ್ರತಿದಿನ 1 ರಿಂದ 3 ವರ್ಷದ ಮಕ್ಕಳಿಗೆ ಸಾಮಾನ್ಯವಾಗಿ 1220 ಕ್ಯಾಲೊರಿ, 22 ಗ್ರಾಂ ಪ್ರೊಟೀನ್, 4 ರಿಂದ 6 ವರ್ಷದ ಮಕ್ಕಳಿಗೆ 1720 ಕ್ಯಾಲೊರಿ, 29 ಗ್ರಾಂ ಪ್ರೊಟೀನ್ ಹಾಗೂ ಗರ್ಭಿಣಿ-ಬಾಣಂತಿಯರಿಗೆ 2366 ಕ್ಯಾಲೊರಿ 45 ಗ್ರಾಂ ಪ್ರೊಟೀನ್‌ನ್ನು ಸೇವಿಸಲು ಶಿಫಾರಸ್ಸು ಮಾಡಿರುತ್ತದೆ. ಪ್ರಸ್ತುತ 6 ತಿಂಗಳಿಂದ 3 ವರ್ಷದ 20,33,000 ಮಕ್ಕಳು, 3 ರಿಂದ 6 ವರ್ಷದ 17,37,000 ಮಕ್ಕಳು, 4,84,000 ಗರ್ಭಿಣಿಯರು 4,65,000 ಬಾಣಂತಿಯರು. ಅಂಗನವಾಡಿ ಕಾರ್ಯಕರ್ತೆಯರು/ಸಹಾಯಕಿಯರು 1,23,000 ಪ್ರಾಯಪೂರ್ವ ಬಾಲಕಿಯರು 92,000 ಹೀಗೆ ಒಟ್ಟು 49,37,000 ಫಲಾನುಭವಿಗಳು ಅಂಗನವಾಡಿ ಕೇಂದ್ರಗಳ ಮೂಲಕ ಪೂರಕ ಪೌಷ್ಠಿಕ ಆಹಾರವನ್ನು ಪಡೆಯುತ್ತಿರುತ್ತಾರೆ. ಅಂಗನವಾಡಿ ಕೇಂದ್ರಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಪ್ರತಿ ತಿಂಗಳು 5 ವರ್ಷದೊಳಗಿನ ಮಕ್ಕಳ ತೂಕವನ್ನು ಮಾಡಿ ಬೆಳವಣಿಗೆ ಪುಸ್ತಕದಲ್ಲಿ ತೂಕ ನಮೂದಿಸುತ್ತಾರೆ. ಮಕ್ಕಳ ವಯಸ್ಸಿಗೆ ಅನುಗುಣವಾಗಿ ಕಂಡುಹಿಡಿದ ತೂಕದ ಆಧಾರದ ಮೇಲೆ ಮಕ್ಕಳ ಪೌಷ್ಠಿಕ ಮಟ್ಟವನ್ನು ಗುರುತಿಸಲಾಗುತ್ತಿದೆ. ಏಪ್ರಿಲ್ 2011 ರಿಂದ ಹೊಸ WHO ಬೆಳವಣಿಗೆ ಮಾನದಂಡದ ಪ್ರಕಾರ ಪೌಷ್ಠಿಕತೆಯ ಮಟ್ಟವನ್ನು ಗುರುತಿಸಲಾಗುತ್ತಿದೆ. ಅದರಂತೆ ರಾಜ್ಯದಲ್ಲಿ ಒಟ್ಟು 61,564 ಮಕ್ಕಳು ಅತೀ ಕಡಿಮೆ ತೂಕವುಳ್ಳವರಾಗಿರುತ್ತಾರೆ.

ಮಕ್ಕಳಲ್ಲಿ ಆರೋಗ್ಯ ಹಾಗೂ ಪೌಷ್ಠಿಕತಾ ಮಟ್ಟವನ್ನು ಹೆಚ್ಚಿಸಲು ಮತ್ತು ಮಕ್ಕಳಲ್ಲಿ ಅಪೌಷ್ಠಿಕತೆ ಮತ್ತು ಶಿಶು ಮರಣದರ ಕಡಿಮೆಗೊಳಿಸಲು ರೂಪುರೇಷೆ ತಯಾರಿಸಲು, ವಿವಿಧ ಇಲಾಖಾ ಅಧಿಕಾರಿಗಳು ವಿಷಯ ತಜ್ಞರು, ಪ್ರತಿಷ್ಠಿತ ಸಂಘ ಸಂಸ್ಥೆಗಳ ಪ್ರತಿನಿಧಿಗಳು, ಇತ್ಯಾದಿಯವರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿರುತ್ತದೆ. ಸಮಿತಿಯು ನೀಡಿರುವ ಶಿಫಾರಸ್ಸುಗಳನ್ವಯ, ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನಲ್ಲಿ ಅತೀ ಕಡಿಮೆ ತೂಕ ಹೊಂದಿದ ಮಕ್ಕಳಿಗೆ ಈಗ ನೀಡುತ್ತಿರುವ ಅಹಾರದ ಜೊತೆಗೆ ದಿನಾಂಕ: 07-11-2011 ರಿಂದ 30-12-2011 ರವರೆಗೆ ಉಚಿತವಾಗಿ ಪ್ರತಿದಿನ ಬೇಯಿಸಿದ ಮೊಟ್ಟೆ ಹಾಗೂ 200 ಎಂ.ಎಲ್ ಹಾಲನು KMF ಹಾಗೂ NECC ಸಂಸ್ಥೆಗಳ ಸಹಕಾರದೊಂದಿಗೆ ನೀಡಲಾಗಿದೆ. ಇದರಿಂದಾಗಿ ಮಕ್ಕಳ ತೂಕದಲ್ಲಿ 100 ರಿಂದ 500 ಗ್ರಾಂ ಹೆಚ್ಚಳವಾಗಿರುತ್ತದೆ.

ಪ್ರಸ್ತುತ, ರಾಜ್ಯದಲ್ಲಿರುವ 61.564 ಅತೀ ಕಡಿಮೆ ತೂಕವುಳ್ಳ ಮಕ್ಕಳಿಗೆ ಈಗಾಗಲೇ ಅಂಗನವಾಡಿ ಕೇಂದ್ರಗಳ ಮೂಲಕ ನೀಡುತ್ತಿರುವ ಪೂರಕ ಪೌಷ್ಠಿಕ ಅಹಾರದ ಜೊತೆಗೆ ವಾರದಲ್ಲಿ 4 ದಿನ ಮೊಟ್ಟೆ ಹಾಗೂ ಎರಡು ದಿನ 200ml ಹಾಲನ್ನು ವಿತರಿಸಲು ಉದ್ದೇಶಿಸಿದ್ದು, ಇದಕ್ಕೆ 2012-2013 ನೇ ಸಾಲಿನಲ್ಲಿ ರೂ. 9,23,46,000/ಗಳ ಅನುದಾನ ಬೇಕಾಗಿದ್ದು, ಸದರಿ ಅನುದಾನವನ್ನು ಬಿಡುಗಡೆ ಮಾಡುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಕೋರಿರುತ್ತಾರೆ. ಈ ವೆಚ್ಚವನ್ನು ಬಾಲಸಂಜೀವಿನಿ ಯೋಜನೆಯಡಿ ಭರಿಸಲಾಗುವುದು ಎಂದು ತಿಳಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 32 ಐಸಿಡಿ 2012, ಬೆಂಗಳೂರು, ದಿನಾಂಕ 28-02-2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಾರ್ಚ್ 2012ನೇ ಮಾಹೆಯಿಂದ ರಾಜ್ಯದಲ್ಲಿ ಅತೀ ಕಡಿಮೆ ತೂಕವುಳ್ಳ 61564 ಮಕ್ಕಳಿಗೆ ಈಗಾಗಲೇ ಅಂಗನವಾಡಿ ಕೇಂದ್ರಗಳ ಮೂಲಕ ನೀಡುತ್ತಿರುವ ಪೂರಕ ಪೌಷ್ಠಿಕ ಆಹಾರದ ಜೊತೆಗೆ ವಾರದಲ್ಲಿ 4 ದಿನ ಮೊಟ್ಟೆಯನ್ನು ಮತ್ತು ಎರಡು ದಿನ 200ml ಹಾಲನ್ನು ಹಾಗೂ ಮೊಟ್ಟೆ ಉಪಯೋಗಿಸದ ಮಕ್ಕಳಿಗೆ ವಾರದಲ್ಲಿ 6 ದಿನ 200ml ಹಾಲನ್ನು ನೀಡಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರಿಗೆ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ- 2235-02-102-0-30 (ಯೋಜನೆ) ರಡಿ (ಬಾಲಸಂಜೀವಿನಿ ಯೋಜನೆಯಡಿ) ಭರಿಸತಕ್ಕದ್ದು.

ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರುಗಳು ಸದರಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಟ್ಟುನಿಟ್ಟಾದ ಸೂಚನೆ/ನಿರ್ದೇಶನವನ್ನು ನೀಡಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಸೂಚಿಸಿದೆ.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 216 ವೆಚ್ಚ – 3:12, ದಿನಾಂಕ: 28-02-2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ-1

ಪಿ.ಆರ್. 887 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ:ಮಮಇ 85 ಪಿಹೆಚ್‌ಪಿ 2012, ಬೆಂಗಳೂರು, ದಿನಾಂಕ:01-03-2012**

ದಿನಾಂಕ 25-07-2006ರ ಸರ್ಕಾರಿ ಆದೇಶ ಸಂಖ್ಯೆ: ಮಮಇ : 242:ಎಸ್‌ಜೆಡಿ:2006ರ ಆದೇಶ ಭಾಗದಲ್ಲಿ "ಹಿರಿಯ ನಾಗರಿಕರಿಗಾಗಿ ಗುರುತಿನ ಚೀಟಿಯನ್ನು ಸಂಬಂಧಪಟ್ಟ ಜಿಲ್ಲೆಯ ಸಹಾಯಕ/ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಅಧಿಕೃತ ಸಹಿ ಮಾಡಿ ವಿತರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ." ಎನ್ನುವ ಪದಗಳ ಬದಲಾಗಿ ಈ ಕೆಳಕಾಣಿಸಿರುವ ಪದಗಳನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು.

"ಹಿರಿಯ ನಾಗರಿಕರಿಗಾಗಿ ಗುರುತಿನ ಚೀಟಿಯನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಇವರು ಅಧಿಕೃತ ಸಹಿ ಮಾಡಿ ವಿತರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.888 **ಬಿ.ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದೋಲೆ**

**ಸಂಖ್ಯೆ:ಸಿಆಸುಇ 116 ಸೇಲೋಯು 2011, ಬೆಂಗಳೂರು, ದಿನಾಂಕ:06–03–2012**

ದಿನಾಂಕ 25–02–2012ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ :116:ಸೇಲೋಯು:2011ರ ಆದೇಶದ 2ನೇ ಸಾಲಿನಲ್ಲಿ ಮತ್ತು ಕ್ರಮ ಸಂಖ್ಯೆ 1ರ ಮೊದಲ ಸಾಲಿನಲ್ಲಿರುವ ದಿನಾಂಕ: 11–08–2011 ಎಂಬುದನ್ನು 18–08–2011 ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವಾ ನಿಯಮಗಳು–2)

ಪಿ.ಆರ್.889

## HORTICULTURE SECRETARIATE

**Sub:-** "Scheme for Integrated Farming in Coconut for Productivity/Improvement with Coconut Development Board Assistance (100% CDB)"-Release of funds-reg.

**Read** : 1) Government Order No.HCD 100 HPP 2011 Dt:28-07-2011.
2) CDB letter No.505/2006-DEV(Karnataka) Dt:08-12-2011.
3) CDB letter No.597/2009-Dev(Kar) Dt:14-12-2011.
4) CDB letter No.597/2009-Dev(Kar) Dt:29-12-2011.
3) Letter of Director of Horticulture No. ತೋಇ/ತೋಬೆ/ಸತೋಅ–2/03/2011–12, Dt:21-02-2012.

**PREAMBLE :**

Sanction had been accorded to release Coconut Development Board funds to the Director of Horticulture vide Government Order read at (1) above where in it was informed to obtain revalidation from Coconut Development Board for utilizing the unspent balance of Rs.1,24,872/-(2010-11). Coconut Development Board has agreed to utilize this fund during 2011-12 as per its letter read at (3) above.

2. Coconut Development Board has released an amount of Rs.31,250/- towards "Production & Distribution of hybrids/other local tall seedlings" for the year 2011-12 vide its letter read at (2) above and matching State share has been requested by the Director of Horticulture.

3. Cocnut Development Board has released an amount of Rs.3,50,000/- towards "Integrated farming in coconut holdings for productivity improvement-Laying out of demonstration plots" for the year 2011-12 vide its letter read at (4) above.

4. The Director of Horticulture has requested to release the funds released by Coconut Development Board together with matching State share as per his letter read at (5) above.

5. This has been examined and hence this Order.

**GOVERNMENT ORDER No.HCD 100 HPP 2011, BANGALORE, DATED:13-03-2012**

Government sanction is hereby accorded to release an amount of Rs.5,37,372/- (Rupees Five Lakh Thirty Seven Thousand Three Hundred and Seventy Two only) to the Director of Horticulture under the "Scheme for Integrated Farming in Cocnut for Productivity/Improvement in the State" during 2011-12 under the Head of Account 2401-00-108-2-35-100 (Financial Assistance/Relief) towards Coconut Development Board share and State share as detailed below;

| Sl. No. | Particulars | Amount Released (Rs.in lakhs) | | |
|---|---|---|---|---|
| | | CDB Share | State Share | Total |
| 1. | Integrated farming in coconut holdings for productivity improvement-laying out of demonstration plots | 3,50,000 | - | 3,50,000 |
| 2. | 2010-11 Revalidated amount | 1,24,872 | - | 1,24,872 |
| 3 | Production & Distribution of hybrids/other local tall seedlings | 1,31,250 | 31,250 | 62,500 |
| | TOTAL | 5,06,122 | 31,250 | 5,37,372 |

2. This order is issued with the concurrence by the Internal Financial Advisor, Agriculture and Horticulture Department vide Note: ತೋಇ 11 ಆಂಆಸ 2011 Dated:07-03-2012

BY ORDER AND IN THE NAME OF THE GOVERNOR OF KARNATAKA
**B.C.PRAKASH**
Under Secretary to Government
Horticulture Department

P.R.890

## ಇಂಧನ ಸಚಿವಾಲಯ

ವಿಷಯ : ಮೆ:ವೆಂಕಟೇಶ್ವರ ಪವರ್ ಪ್ರಾಜೆಕ್ಟ್ ಲಿ., ರವರ ಕಬ್ಬಿನ ಸಿಪ್ಪೆಯಾಧಾರಿತ ಸಹ ವಿದ್ಯುತ್ ಘಟಕದ ಸಾಮರ್ಥ್ಯವನ್ನು ಹೆಚ್ಚಿಸುವ ಕುರಿತು.

ಓದಲಾಗಿದೆ : 1) ಸರ್ಕಾರಿ ಪತ್ರ ಸಂಖ್ಯೆ:ಡಿಇ 26 ಎನ್‌ಸಿಇ 2002 ದಿನಾಂಕ:27-03-2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/04/ಎಫ್-31/ಐಎಸ್‌ಎಂಸಿಎಲ್ 2011-12/4165, ದಿನಾಂಕ:22-10-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ: ವೆಂಕಟೇಶ್ವರ ಪವರ್ ಪ್ರಾಜೆಕ್ಟ್ ಲಿಮಿಟೆಡ್., ಇವರಿಗೆ 15 ಮೆಗಾ ವ್ಯಾಟ್ (ಗ್ರಾಸ್) ಮತ್ತು 10 ಮೆಗಾ ವ್ಯಾಟ್ (ಎಕ್ಸಪೋರ್ಟಬಲ್) ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಘಟಕವನ್ನು ಬೆಳಗಾವಿ ಜಿಲ್ಲೆಯ, ಚಿಕ್ಕೋಡಿ ತಾಲ್ಲೂಕಿನ, ಬೆಡಕಿಹಾಳ್ ಗ್ರಾಮದಲ್ಲಿ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂದನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ವೆಂಕಟೇಶ್ವರ ಪವರ್ ಪ್ರಾಜೆಕ್ಟ್ ಲಿಮಿಟೆಡ್., ರವರಿಗೆ ನಿರಾಕ್ಷೇಪಣೆ ನೀಡಿರುವ ಮೇಲಿನ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಘಟಕವು ದಿನಾಂಕ:03-11-2004ರಂದು ಕಾರ್ಯಾರಂಭಗೊಂಡಿರುತ್ತದೆ ಎಂದು ತಿಳಿಸಿರುತ್ತಾರೆ. ಹಾಗೂ ಈ ಘಟಕದ 15 ಮೆಗಾ ವ್ಯಾಟ್ (ಗ್ರಾಸ್) ಮತ್ತು 10 ಮೆಗಾ ವ್ಯಾಟ್ (ಎಕ್ಸ್‌ಪೋರ್ಟಬಲ್) ಸಾಮರ್ಥ್ಯವನ್ನು 30 ಮೆ.ವ್ಯಾ. (ಗ್ರಾಸ್) ಮತ್ತು 20 ಮೆಗಾ ವ್ಯಾಟ್ (ಎಕ್ಸಪೋರ್ಟಬಲ್) ಸಾಮರ್ಥ್ಯಕ್ಕೆ ಹೆಚ್ಚಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 414 ಎನ್‌ಸಿಇ 2011, ಬೆಂಗಳೂರು, ದಿನಾಂಕ: 29ನೇ ಫೆಬ್ರವರಿ 2012**

ಮೆ: ವೆಂಕಟೇಶ್ವರ ಪವರ್ ಪ್ರಾಜೆಕ್ಟ್ ಲಿಮಿಟೆಡ್.,ರವರಿಗೆ ಬೆಳಗಾವಿ ಜಿಲ್ಲೆಯ, ಚಿಕ್ಕೋಡಿ ತಾಲ್ಲೂಕಿನ, ಬೆಡಕಿಹಾಳ್ ಗ್ರಾಮದಲ್ಲಿ ಸ್ಥಾಪಿಸಲು ನಿರಾಕ್ಷೇಪಣೆ ನೀಡಿರುವ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಘಟಕದ ಸಾಮರ್ಥ್ಯವನ್ನು 15 ಮೆಗಾ ವ್ಯಾಟ್ (ಗ್ರಾಸ್) ಮತ್ತು 10 ಮೆಗಾ ವ್ಯಾಟ್ (ಎಕ್ಸಪೋರ್ಟಬಲ್) ಸಾಮರ್ಥ್ಯದಿಂದ 30 ಮೆ.ವ್ಯಾ. (ಗ್ರಾಸ್) ಮತ್ತು 20 ಮೆಗಾ ವ್ಯಾಟ್ (ಎಕ್ಸಪೋರ್ಟಬಲ್) ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಟು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.891

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## COMMERCE AND INDUSTRIES SECRETARIATE

**Sub:-** Approval to the Project Proposal of M/s Kalawati Ispat & Power Pvt. Ltd., to establish a "300 MW Gas Power Plant, 270 MW Thermal Power Plant, 2.5 Million MTPA Iron Ore Beneficiation, 1.80 Million MTPA Pelletisation, 0.5 Million MTPA Mn Beneficiation, 0.21 Million MTPA DRI, Rolling Mill & Induction Furnace with 40 MW Captive Power Plant" at Janthli and Shiroor Villages, Mundargi Taluk, Gadag District.

**Read** : 1) Government Order No.CI 196 SPI 2010, Dated:02-06-2010.

2) Proceedings of the 22nd State High Level Clearance Committee (SHLCC) Meeting held on 24-05-2010.

**PREAMBLE :**

The project proposal of M/s Kalawati Ispat & Power Pvt., Ltd., to establish a "300 MW Gas Power Plant, 270 MW Thermal Power Plant, 2.5 Million MTPA Iron Ore Beneficiation, 1.80 Million MTPA Pelletisation, 0.5 Million MTPA Manganese Beneficiation, 0.21 MTPA DRI, Rolling Mill & Induction Furnace with 40 MW Captive Power Plant" with an investment of Rs.2883.28 crores in 580 acres of land in Janthli and Shiroor Villages, Mundargi Taluk, Gadag District, was approved by the SHLCC at its 22nd meeting held on 24-05-2010. KIADB to acquire and allot land as SUC. Accordingly Government Order vide No.: CI/196/SPI/2010, dated:02-06-2010, has been issued.

The company in its letter dated: 26-04-2011 had informed that the project site identified earlier in Mundargi Taluk, Gadag District is not suitable due to problem in taking railway siding to the project site by crossing NH-63. Now they have identified alternative land to an extent of 580 acres in the village limits of Harlapur of Gadag Taluk & District at various Sy.Nos as per the Annexure enclosed. Further, the company has sought sanction of 20 MW Power from 110 KV line till their Captive/Power Plant is commissioned. There is no change in the project cost and requirement of water.

The SLAO, KIADB, Dharwad, vide letter dated: 10-06-2011 had reported that the lands now identified by the Company are abutting National Highway-63 & Bellary-Hubli Railway line and suitable for the project. Further it is reported that the said lands are not having any irrigation facilities and only dry crops are being grown.

KSPCB vide letter dated:13-06-2011 had opined that the above said project at the above loction can come up subject to obtaining Environmental Clearance from MOEF, GOI, and the Consent for establishment from KSPCB. They shall leave buffer zone of minimum 500 mtrs from the boundary of the unit to National Highway & Railway line.

The subject was discussed in the 25th SHLCC meeting held on 14-07-2011. The Committee noted about over lapping of land identified by M/s Kalawati Ispat & Power Pvt. Ltd., with other projects, the Committee felt that the proposal to be re-examined in detail by the Screening Committee and hence, the subject was deferred to Screening Committee.

Now, the company vide their letter dated 04-10-2011 have informed that proposed railway siding from Haralapura Railway Station through Sy.Nos.188 to 193 of Harlapura Village are overlapping with the land proposed by M/s Adhunik Metaliks Ltd., identified for their project. The matter has been sorted out between the two companies by entering into MOU on 3-10-2011. In Clause No.6, it is agreed that land from Harlapura Railway Station and up to Plot No.193 to be purchased by KIPPL and Plot No.195 onwards and upto Halligudi Station will be purchased by AML. In Clause No.6 both have permitted the Right of Way of taking off railway siding subject to approval of concerned Railway Authority. The MOU entered by them is valid for a period of 3 years or till the construction of railway sidings by both parties or whichever is earlier. To this effect, M/s Adhunik Metaliks Ltd., has also given a similar letter and the representatives of both companies have affixed their signatures in the combined map.

The subject was placed in the 26th SHLCC and change of location subject to MoU between M/s Adhunik Metaliks Ltd., and M/s Kalawati Ispat & Power Pvt. Ltd., is arrived at.

Now M/s Kalawati ispat & Power Pvt. Ltd., and M/s. Adhunik Metaliks Ltd., have submitted a registered MoU between them for the long term usage of the land for Railway Siding. The registered document is submitted to this office.

Hence the following order.

**GOVERNMENT ORDER No.CI 290 SPI 2011, BANGALORE, DATED:07-03-2012**

Government is pleased to approve the change of location for the proposal of M/s Kalawati Ispat & Power Pvt. Ltd., from Janthli and Shiroor Villages, Mundargi Taluk, Gadag District to Harlapura Village, Gadag Taluk & District with the conditions that the Company shall adhere to the norms of KSPCB and to obtain and furnish consents of the land owners (70%) to KIADB of the total extent of 580 acres of land to be acquired by KIADB for the project. The Committee also approved for sanction of 20 MW of initial power instead of 1 MW by ESCOM till their CPP starts.

The Committee directed project proponents to commission railway siding as per their MOU dated 03-10-2011 and to enter into a long term agreement for Right of Way to use railway siding.

BY Order and in the name of the Governor of Karnataka
**JYOTHI R.J.**
Desk Officer (Technical Cell)
Commerce & Industries Department

P.R.892

## COMMERCE AND INDUSTRIES SECRETARIATE

**Sub:-** Approval to the Project Proposal of M/s Adhunik Metaliks Ltd., to establish a "2.2 MTPA Integrated Steel Plant" at Halligudi Village, Mundargi Taluk and Haralapura Village, Gadag Taluk & District.

**Read** : 1) Proceedings of the 21st State High Level Clearance Committee (SHLCC) Meeting held on 29-03-2010.
2) Government Order No.CI 177 SPI 2010, Dated:17-02-2010.
3) Proceedings of the 26th State High Level Clearance Committee (SHLCC) Meeting held on 09-11-2011.

**PREAMBLE :**

The project proposal of M/s Adhunik Metaliks Ltd., to establish a "2.2 MTPA Integrated Steel Plant and 220 MW Captive Power Plant" at Deosugur Village, Raichur Taluk and District, with an investment of Rs.5568.40 cr., generating employment to about 2187 persons, was approved by the SHLCC at its 21st meeting held on 29-03-2010. Land identified by the company at Deosugur Village, out of the land Bank identified by KIADB. Accordingly Government Order vide No:CI 177 SPI 2010, dated:17-05-2010, has been issued.

The company in its letter dated:26-07-2011 had stated that the project site are conomically un viable to establish the proposed integrated Steel Plant as these sites are away from mineral resources. Further, the company has sought approval for change of location to Halligudi and Haralapur Villages, Gadag District in 750 acres of land already identified by KIADB.

The SLAO, KIADB, Dharwad, vide letter dated: 10-06-2011 had reported that the lands now identified by the Company are abutting National Highway – 63 & Bellary-Hubli Railway line and suitable for the project. Further it is reported that the said lands are not having any irrigation facilities and only dry crops are being grown.

KSPCB vide letter dated: 13-06-2011 had opined that the above said project at the above location can come up subject to obtaining Environmental Clearance from MOEF, GOI, and Consent for establishment from KSPCB. They shall leave buffer zone of minimum 500 mtrs from the boundary of the unit to National Highway & Railway line.

The subject was discussed in the 21st SHLCC meeting held on 29-03-2010. The Committee noted about over lapping of land identified by M/s Adhunik Metaliks Ltd., with other projects, the Committee felt that the proposal to be re-examined in detail by the Screening Committee and hence, the subject was deferred to Screening Committee.

Now, M/s Kalawati Ispat Power & Pvt. Ltd., have informed vide their letter dated 04-10-2011 that proposed railway siding from Haralapura Railway Station through Sy.Nos. 188 to 193 of Hralapura Village are overlapping with the land proposed by M/s Adhunik Metaliks Ltd., identified for their project. The matter has been sorted out between the two companies by entering into MOU on 3-10-2011. In Clause No.6, it is agreed that land from Harlapura Railway Station and up to Plot No.193 to be purchased by

KIPPL and Plot No.195 onwards and upto Halligudi Station will be purchased by AML. In Clause No.6 both have permitted the Right of Way for taking off railway siding subject to approval of concerned Railway Authority. The MOU entered by them is valid for a period of 3 years or till the construction of railway sidings by both parties or whichever is earlier. To this effect, M/s. Adhunik Metaliks Ltd., has also given a similar letter and the representatives of both companies have affixed their signatures in the combined map.

The subject was placed in the 26th SHLCC for change of location and was approved subject to MoU between M/s.Adhunik Metaliks Ltd., and M/s Kalawati Ispat & Power Pvt. Ltd., is arrived at.

Now M/s. Kalawati Ispat & Power Pvt. Ltd., and M/s. Adhunik Metaliks Ltd., have submitted a registered MoU between them for the long term usage of the land for Railway Siding. The registerd document is submitted to this office.

Hence the following order.

**GOVERNMENT ORDER No.CI 177 SPI 2010, BANGALORE, DATED:07-03-2012**

Government is pleased to approve the change of location from Deosugur Village, Raichur Taluk & District to 750 acres at a various survey numbers in Halligudi & Haralapur villages, Gadag District; as per annexure enclosed to this Government Order; with the conditions that the Company shall bring at least 70% consents from the land owners to KIADB for acquisition and adhere to the norms of KSPCB. The Committee also approved for deletion of 220 MW Captive Power Plant from the project.

The Committee directed project proponents to commission railway siding as per their MOU dated 3-10-2011 and to enter into a long term agreement for Right of Way to use railway siding.

BY Order and in the name of the Governor of Karnataka
**JYOTHI R.J.**
Desk Officer (Technical Cell)
Commerce & Industries Department

P.R.893

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

ವಿಷಯ : 2011–12ನೇ ಸಾಲಿಗೆ ಕರ್ನಾಟಕ ಕಾನೂನು ಮತ್ತು ಸಂದೀಯ ಸುಧಾರಣಾ ಸಂಸ್ಥೆಗೆ ಸಹಾಯಾನುಧಾನ ಬಿಡುಗಡೆ ಮಾಡುವ ಬಗ್ಗೆ

ಓದಲಾಗಿದೆ : 1) ಸರ್ಕಾರದ ಆದೇಶ ಸಂಖ್ಯೆ: ಲಾ 57 ಎಲ್ಎಎಂ 2011, ದಿನಾಂಕ:07–04–2011.
2) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 209 ಬಿಆರ್ಎಸ್ 2011, ದಿನಾಂಕ:04–02–2012 ಆರ್ಥಿಕ ಇಲಾಖೆಯಿಂದ.
3) ಸರ್ಕಾರದ ಆದೇಶ ಸಂಖ್ಯೆ: ಲಾ 12 ಎಲ್ಎಡಿ 2011, ದಿನಾಂಕ:02–05–2011, 06–07–2011, 29–10–2011 ಮತ್ತು 16–02–2012.
4) ಪತ್ರ ಸಂಖ್ಯೆ:12/ಕಾಸಂಸು/ಬಿ–1/2011–12/82 ದಿನಾಂಕ:06–02–2012 ನಿರ್ದೇಶಕರು, ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆರವರಿಂದ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 07–04–2011ರ ಆದೇಶದಲ್ಲಿ ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಕ್ರಿಯಾ ಯೋಜನೆಗಳನ್ನು 2011–12 ಸಾಲಿನಲ್ಲಿ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ. 2011–12ನೇ ಸಾಲಿನಲ್ಲಿ ಕರ್ನಾಟಕ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಂಸ್ಥೆಗೆ 2014–00–800–5–03–059ರ (ಯೋಜನೆ) ಲೆಕ್ಕ ಶೀರ್ಷಿಕೆಯಡಿಯಲ್ಲಿ ರೂ.45.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಲಾಗಿದೆ, ಮತ್ತು ಮೇಲೆ (2)ರಲ್ಲಿ ಓದಲಾದ ದಿನಾಂಕ:04–02–2012ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ಸ್ಥಳಾವಕಾಶಕ್ಕೆ ಒದಗಿಸಿಕೊಳ್ಳುವ ವೆಚ್ಚಗಳಿಗೆ (To meet the expenditure towards infrastructure of the office of Karnataka Institute of Law and Parliamentary Reforms) ಹೆಚ್ಚುವರಿ ಅನುದಾನವಾಗಿ ರೂ.31.00 ಲಕ್ಷಗಳನ್ನು ಒದಗಿಸಲಾಗಿದೆ. ಉಲ್ಲೇಖಿತ (3)ರಲ್ಲಿ ಓದಲಾದ ದಿನಾಂಕ 02–05–2011, 06–07–2011 ಮತ್ತು 29–10–2011ರ ಆದೇಶಗಳಲ್ಲಿ ಕ್ರಮವಾಗಿ ಒಂದು ಎರಡು ಮತ್ತು ಮೂರನೇ ಕಂತಾಗಿ ತಲಾ ರೂ.11.25 ಲಕ್ಷಗಳಂತೆ ಒಟ್ಟು ರೂ.33.75 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು ಮತ್ತು ದಿನಾಂಕ 16–02–2012 ಆದೇಶದಲ್ಲಿ ನಾಲ್ಕನೇ ಕಂತಾಗಿ ರೂ.31.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಪ್ರಸ್ತುತ ನಿರ್ದೇಶಕರು ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ ಇವರು ಮೇಲೆ (4)ರಲ್ಲಿ ಓದಲಾದ ದಿನಾಂಕ 06–02–2012ರ ಪತ್ರದಲ್ಲಿ ಸಂಸ್ಥೆಯ ಸಿಬ್ಬಂದಿ ವೇತನ ಮತ್ತು ಆಡಳಿತಾತ್ಮಕ ವೆಚ್ಚಗಳಿಗಾಗಿ ತುರ್ತಾಗಿ ರೂ.11.25 ಲಕ್ಷಗಳ ಐದನೇ ಕಮತಿನಲ್ಲಿ ಹಣ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಂ.ಲಾ. 12 ಎಲ್ಎಡಿ 2011, ಬೆಂಗಳೂರು, ದಿನಾಂಕ: 06ನೇ ಮಾರ್ಚ್ 2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2011–12ನೇ ಸಾಲಿಗೆ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಸಿಬ್ಬಂದಿ ವೇತನ ಮತ್ತು ಆಡಳಿತಾತ್ಮಕ ವೆಚ್ಚಗಳಿಗಾಗಿ ಮತ್ತು ಇತರೆ ವೆಚ್ಚಗಳ ನಿರ್ವಹಣೆಗಳಿಗೆ ಐದನೇ ಕಂತಾಗಿ ರೂ.11.25 ಲಕ್ಷಗಳು (ರೂಪಾಯಿ ಹನ್ನೊಂದು ಲಕ್ಷದ ಇಪ್ಪತ್ತೈದು ಸಾವಿರ ಮಾತ್ರ) ಸಹಾಯಾನುದಾನವನ್ನು ಈ ಕೆಳಕಂಡ ಷರತ್ತಿನೊಂದಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಸಂಸ್ಥೆಗೆ ನಿಗದಿಗೊಳಿಸಿರುವ ಕ್ರಿಯಾ ಯೋಜನೆ ಕಾರ್ಯಕ್ರಮಗಳಿಗೆ ಮಾತ್ರ ಬಳಸತಕ್ಕದ್ದು.
2. ಆರ್ಥಿಕ ಇಲಾಖೆ ಆಗಿಂದಾಗ್ಗೆ ಹೊರಡಿಸಿರುವ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
3. ಬಿಡುಗಡೆ ಮಾಡಿರುವ ಹಣಕ್ಕೆ ನಿಗದಿತ ನಮೂನೆಯಲ್ಲಿ ಬಳಕೆ ಪ್ರಮಾಣ ಪತ್ರ ಒದಗಿಸುವುದು.

ಆ ರೀತಿ ಬಿಡುಗಡೆ ಮಾಡುವ ಮೊತ್ತವನ್ನು ಲೆಕ್ಕ ಶೀರ್ಷಿಕೆ "2014–00–800–5–03 ನ್ಯಾಯಾಂಗ" ಇತರೆ ಪೂರ್ವಭಾವಿ ಸೌಕರ್ಯಗಳು – 059 ಸಹಾಯನುಧಾನ (ಯೋಜನೆ)" ಇದರಡಿಯಲ್ಲಿ ಭರಿಸುವುದು. ಇದನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ: ಆಇ 83 ವೆಚ್ಚ 10/2012 ದಿನಾಂಕ 02–03–2012ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು ನ್ಯಾಯ ಮತ್ತು ಮಾನವ
ಹಕ್ಕುಗಳ ಇಲಾಖೆ

ಪಿ.ಆರ್.894

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ. ಹನುಮಂತರಾಯ, ಮಾಜಿ ಪೊಲೀಸ್ ಇನ್‌ಸ್ಪೆಕ್ಟರ್, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ : ಇವಿ/1/ಈವ/2010 (ಆ.ಪು.ಸಂ. 660/ಈವ/2010 ದಿನಾಂಕ : 03–11–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬಿ(8)117/2008–09 ದಿನಾಂಕ : 16–08–2011.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 08–09–2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)117/2008–09 ದಿನಾಂಕ : 20–01–2012.

**ಪ್ರಸ್ತಾವನೆ :**

ಶ್ರೀ ಬಿ.ಹನುಮಂತರಾಯ, ಇವರು ಲಿಂಗಸುಗೂರು ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್ ಇನ್‌ಸ್ಪೆಕ್ಟರ್, ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಕ್ರಮ ಸಂಭಾವನೆಗೆ ಒತ್ತಾಯಿಸಿ, ಸಿಬ್ಬಂದಿಯನ್ನು ಕಳುಹಿಸಿ ಹಣ ಪಡೆದು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇನ್ನೋರ್ವ ಸಿಬ್ಬಂದಿಯೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರೊಂದಿಗೆ 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಶ್ರೀ ಅನಂತರಾಜು ಬಿನ್ ಗುರಪ್ಪ ಚೌಲ್, ಶಿಕ್ಷಕರು, ಕರ್ನಾಟಕ ಪ್ರೌಢ ಶಾಲೆ, ಗುಲ್ಬರ್ಗಾ ಇವರು ಲಿಂಗಸುಗೂರಿನಲ್ಲಿ ಒಂದು ವೃದ್ಧಪ್ಯ ಶಾಲೆಯನ್ನು ನಡೆಸುತ್ತಿದ್ದು ಸರ್ಕಾರದಿಂದ ಈ ಸಂಬಂಧದಲ್ಲಿ ಹಣ ಮಂಜೂರು ಆಗುತ್ತಿದ್ದು, ಸರ್ಕಾರದಿಂದ ಮಂಜೂರಾದ ಹಣದ ದುರ್ಬಳಕೆಯಾದ ಬಗ್ಗೆ ಸ್ಥಳೀಯ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದರ ಸಂಬಂಧ ಶ್ರೀ ಅನಂತರಾಜು ಬಿನ್ ಗುರಪ್ಪ ಚೌಲ್ ಇವರು ಮಾನ್ಯ ಉಚ್ಚ ನ್ಯಾಯಾಲಯದಿಂದ ನಿರೀಕ್ಷಣಾ ಜಾಮೀನ ಪಡೆದಿದ್ದರು ನೀವು ಸದರಿಯವರನ್ನು ನಿರೀಕ್ಷಣಾ ಜಾಮೀನಿನ ಮೇಲೆ ಬಿಡುಗಡೆ ಮಾಡಲು ರೂ. 52,000–00 ಅಕ್ರಮ ಸಂಭಾವನೆ ಕೊಡುವಂತೆ ಹೇಳಿ ಅದರಲ್ಲಿಯ ಮೊದಲನೇ ಕಂತಾಗಿ ರೂ. 25,000/– ಕೊಡುವಂತೆ ಒತ್ತಾಯಿಸಿ ಸದರಿ ಹಣವನ್ನು ಪಡೆಯಲು ಶ್ರೀ ವೀರಭದ್ರಪ್ಪ, ಸಿಪಿಸಿ–24, ಲಿಂಗಸುಗೂರು ಪೊಲೀಸ್ ಠಾಣೆ, ಇವರನ್ನು ಕಳುಹಿಸುವುದಾಗಿ ಹೇಳಿ ಸದರಿಯವರ ಕೈಯಲ್ಲಿ ಹಣಕೊಡುವಂತೆ ತಿಳಿಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಆರೋಪ.

ನೀವು ಲಿಂಗಸುಗೂರು ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 19–07–2007 ರಂದು ಲಿಂಗಸುಗೂರು ಸಹಾಯಕ ಆಯುಕ್ತರು ಶ್ರೀ ಅನಂತರಾಜು ತಂದೆ ಗುರಪ್ಪ ಚೌಲ್, ಇವರು ನಡೆಸುತ್ತಿದ್ದ ವೃದ್ಧಾಶ್ರಮಕ್ಕೆ ಬೇಟಿ ನೀಡಿ ಆಶ್ರಮದ ಹಣ ದುರುಪಯೋಗವಾದ ಬಗ್ಗೆ ಲಿಂಗಸುಗೂರು ಪೊಲೀಸ್ ಠಾಣೆಯಲ್ಲಿ ದೂರನ್ನು ನೀಡಿದ್ದು, ಇದನ್ನು ಅರಿತ ಶ್ರೀ ಅನಂತರಾಜು ತಂದೆ ಗುರಪ್ಪ ಚೌಲ್ ಇವರು ಉಚ್ಚ ನ್ಯಾಯಾಲಯದಿಂದ ಜಾಮೀನನ್ನು ಪಡೆದು ಲಿಂಗಸುಗೂರು ಠಾಣೆಗೆ ಹಾಜರಾಗಿ ತಾನು ಪಡೆದ ಜಾಮೀನಿನ ಅನ್ವಯ ತನ್ನನ್ನು ಜಾಮೀನಿನ ಮೇಲೆ ಬಿಡಬೇಕೆಂದು ಕೋರಲಾಗಿ ಎ ಮಗನೆ ನೀನು ಸರ್ಕಾರದಿಂದ ಒಟ್ಟು ರೂ. 3,64,133/– ಗಳನ್ನು ಪಡೆದಿರುವಿ ಇದಕ್ಕೆ ನೀನು 15% ರಷ್ಟು ಅಂದಾಜು ರೂ. 52,000/–ವನ್ನು ನನಗೆ ನೀಡಿದರೆ ಜಾಮೀನಿನ ಮೇಲೆ ಬಿಡುತ್ತೇನೆ. ಇಲ್ಲದಿದ್ದರೆ ನಿನ್ನ ಬಟ್ಟೆ ಬಿಚ್ಚಿ ಅರೆಸ್ಟು ಮಾಡುತ್ತೇನೆ ಎಂದು ಹೇಳಿ ಅಸಭ್ಯತನದಿಂದ ವರ್ತಿಸಿ ಸದರಿ ಮೊತ್ತದಲ್ಲಿಯ ಒಂದು ಕಂತು ರೂ. 25,000/–ನ್ನು ಶ್ರೀ ವೀರಭದ್ರಪ್ಪ ಸಿಪಿಸಿಯವರ ಕೈಯಲ್ಲಿ ನೀಡುವಂತೆ ಒತ್ತಾಯಿಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನದಿಂದ ವರ್ತಿಸಿ ಅಮಾಯಕರಿಗೆ ಅಕ್ರಮ ಸಂಭಾವನೆ ನೀಡುವಂತೆ ತೊಂದರೆ ನೀಡಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 03-11-10ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ : 19-10-2007 ರಿಂದ 12-02-2008ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 16-08-2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ,. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತನ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 99 ಪೊಸಿಅ 2011 ಬೆಂಗಳೂರು, ದಿನಾಂಕ : 03.03.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಹನುಮಂತರಾಯ, ಮಾಜಿ ಪೊಲೀಸ್ ಇನ್‌ಸ್ಪೆಕ್ಟರ್, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 895

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಗೋಪಾಲ್ ಎಸ್. ಸಿ.ಪಿ.ಸಿ-1467, ದೊಡ್ಡಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(5)/ಶಿಕ್ಷೆ/118/2009 (ಓ.ಬಿ. ಸಂಖ್ಯೆ : 52/2010-11) ದಿನಾಂಕ : 02-02-2011.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ : 14/ಅಪೀಲು/ಸಿಬ್ಬಂದಿ-2/2011-12 (ಓ.ಬಿ. ಸಂಖ್ಯೆ : 46/2011-12) ದಿನಾಂಕ : 15-06-2011.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 06-10-2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)/47/2011-12, ದಿನಾಂಕ : 04-01-2012.

**ಪ್ರಸ್ತಾವನೆ :**

ಶ್ರೀ ಎಸ್. ಗೋಪಾಲ, ಇವರು ಭದ್ರಾವತಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿಯಲ್ಲಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಸಿಪಿಸಿ 1467, ಶ್ರೀ ಗೋಪಾಲ್ ಎಸ್. ಭದ್ರಾವತಿ ಗ್ರಾಮಾಂತರ ಠಾಣೆ ಆದ ನೀವು ಭದ್ರಾವತಿ ಗ್ರಾಮಾಂತರ ವೃತ್ತ ವ್ಯಾಪ್ತಿಯಲ್ಲಿ ಕಲ್ಲು ಗಣಿಗಾರಿಕೆ ನಡೆಯಲು ಅವಕಾಶ ಮಾಡಿಕೊಟ್ಟು ಗುನ್ನೆ ನಂ : 165/09 ಕಲಂ : 304(ಎ) ಐ.ಪಿ.ಸಿ. ಸಹಿತ 3,4 ಎಕ್ಸ್‌ಪ್ಲೋಸಿವ್ ಸಬ್‌ಸ್ಟಾನ್ಸ್ ಆಕ್ಟ್ 1908 ಪ್ರಕರಣ ದಾಖಲಾಗಲು ಕಾರಣರಾಗಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿ ಕರ್ತವ್ಯಲೋಪ ಎಸಗಿದ ಬಗ್ಗೆ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 02-02-2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡಲಾಗಿದೆ. ದಿನಾಂಕ : 15-08-2009 ರಿಂದ 04-09-2009ರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 15-06-2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ,. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 107 ಪೊಸಿಅ 2011 ಬೆಂಗಳೂರು, ದಿನಾಂಕ : 03.03.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋಪಾಲ್ ಎಸ್. ಸಿ.ಪಿ.ಸಿ–1467, ದೊಡ್ಡಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 896

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಎಸ್. ಈಶ್ವರಯ್ಯ, ಪಿ.ಸಿ.–513, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಕಮಾಂಡೆಂಟ್, 4ನೇ ಪಡೆ, ಕೆ.ಎಸ್.ಆರ್.ಪಿ.ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ : ಡಿಇ–31/2008–09 (ಓ.ಬಿ. ಸಂಖ್ಯೆ : 8/2010–11) ದಿನಾಂಕ : 06–05–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು/03/2010–11 ದಿನಾಂಕ : 6–10–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 03–10–2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)/46/2011–12, ದಿನಾಂಕ : 29–12–2011.

**ಪ್ರಸ್ತಾವನೆ :**

ಶ್ರೀ ಎಸ್. ಎಂ. ಈಶ್ವರಯ್ಯ, ಪೊಲೀಸ್ ಕಾನ್ಸ್‌ಟೇಬಲ್, 4ನೇ ಪಡೆ, ಕೆ.ಎಸ್.ಆರ್.ಪಿ., ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಘೋರ ದುರ್ನಡತೆ ಎಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

1. ಪೇದೆ 99 ಎಂ.ಎಸ್. ಈಶ್ವರಯ್ಯ, 'ಸಿ' ದಳ, 4ನೇ ಪಡೆ, ಕೆ.ಎಸ್.ಆರ್.ಪಿ, ಆದ ನೀವು ಹಲಸೂರು ಗೇಟ್ ಮಹಿಳಾ ಪೊಲೀಸ್ ಠಾಣೆ, ಗುನ್ನೆ ಸಂಖ್ಯೆ : 08/2009 ಕಲಂ 498(ಎ) ಭಾ.ದ.ಸಂ. ಸೆಕ್ಷನ್ 3 ಮತ್ತು 4 ಡಿ.ಪಿ. ಆಕ್ಟ್ ಪ್ರಕರಣದಲ್ಲಿ ಭಾಗಿಯಾಗಿ ದಸ್ತಗಿರಿ ಕ್ರಮಕ್ಕೊಳಗಾಗಿ ಶಿಸ್ತು ಇಲಾಖೆಗೆ ಸಲ್ಲದ ಘೋರ ದುರ್ನಡತೆಯ ಕೃತ್ಯವನ್ನೆಸಗಿರುತ್ತೀರೆಂಬ ಆರೋಪವನ್ನು ನಿಮ್ಮ ಮೇಲೆ ಹೊರಿಸಲಾಗಿದೆ.
2. ನೀವು ನಿಮ್ಮ ಸಹೋದರ (ತಮ್ಮ) ಮಾಹಾಲಿಂಗಯ್ಯರವರ ಪತ್ನಿ ಶ್ರೀಮತಿ ಮಮತಾರವರಿಗೆ ವರದಕ್ಷಿಣೆಗೆ ಸಂಬಂಧಿಸಿದಂತೆ ಮಾನಸಿಕ ಮತ್ತು ದೈಹಿಕ ಹಿಂಸೆ ನೀಡಿದ ಕೃತ್ಯದಲ್ಲಿ ಭಾಗೀದಾರರಾಗಿ ಶಿಸ್ತು ಇಲಾಖೆಯಲ್ಲಿನ ನಿಬಂಧನಾತ್ಮಕ ನಿಯಮಗಳನ್ನು ಗಾಳಿಗೆ ತೂರಿ, ಕೆ.ಸಿ.ಎಸ್. (ನಡತೆ) ನಿಯಮಗಳು 1966ರ ನಿಯಮ 3 ಮತ್ತು 4 ರಲ್ಲಿನ ನಿಬಂಧನೆಗಳನ್ನು ಉಲ್ಲಂಘಿಸಿ ಸರಕಾರಿ ನೌಕರನಿಗೆ ಸಲ್ಲದ ದುರ್ವರ್ತನೆಯ ಆರೋಪವನ್ನು ಎಸಗಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಕಮಾಂಡೆಂಟ್, 4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 06–05–2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ, ದಿನಾಂಕ : 24–02–2009 ರಿಂದ 04–03–2010ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಈ ಅವಧಿಯಲ್ಲಿ ಪಡೆದ ವೇತನ ಭತ್ಯೆಗಳನ್ನು ಜೀವನಾಂಶ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 06–10–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿ, ಇವರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ 5 ವರ್ಷಗಳ ಕಾಲ ಇಳಿಸಲಾಗಿದೆ. ತದನಂತರ ಸೇವೆಯಿಂದ ವಜಾಗೊಳಿಸಿದ ಆದೇಶದ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ನಿಗಧಿಪಡಿಸುವಂತೆ ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು dies-non ಎಂದು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಘೋರ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 108 ಪೊಸಿಅ 2011 ಬೆಂಗಳೂರು, ದಿನಾಂಕ : 03.03.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಸ್. ಈಶ್ವರಯ್ಯ, ಪಿ.ಸಿ.-513, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 897

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಗ್ರಂಥಾಲಯ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಂಥಾಲಯಕ್ಕೆ 2012-13ನೇ ಸಾಲಿಗೆ ನಿಯತಕಾಲಿಕೆ/ದಿನಪತ್ರಿಕೆಗಳನ್ನು ತರಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ :** ಟೆಂಡರ್ ಪ್ರಕಟಣೆ ಸಂಖ್ಯೆ : ಸಿಆಸುಇ 01 ಸಗ್ರನಿ 2012, ದಿನಾಂಕ : 24-01-2012.

**ಪ್ರಸ್ತಾವನೆ :**

ಓದಲಾಗಿರುವ ಟೆಂಡರ್ ಪ್ರಕಟಣೆಯನ್ನು ದಿನಾಂಕ : 31-01-2012ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಅನುಭವಸ್ಥ ಸರಬರಾಜುದಾರರಿಂದ ಸಚಿವಾಲಯ ಗ್ರಂಥಾಲಯಕ್ಕೆ 2012-2013ನೇ ಸಾಲಿಗೆ ನಿಯತಕಾಲಿಕೆ/ದಿನಪತ್ರಿಕೆಗಳನ್ನು ಸರಬರಾಜು ಮಾಡಲು ದರ ಪಟ್ಟಿಗಳನ್ನು ಆಹ್ವಾನಿಸಲಾಗಿತ್ತು. ಈ ಟೆಂಡರ್ ಪ್ರಕಟಣೆಗೆ ನಾಲ್ಕು ಗುತ್ತಿಗೆದಾರರಾದ 1) ಮೆ: ಲೋಹಿತ್ ಎಂಟರ್‌ಪ್ರೈಸಸ್, ರಾಜರಾಜೇಶ್ವರಿನಗರ, ಬೆಂಗಳೂರು 2) ಮೆ: ಲತಾ ಎಂಟರ್‌ಪ್ರೈಸಸ್, ಅಬ್ಬಾಯಪ್ಪ ಲೇಔಟ್, ಬೆಂಗಳೂರು 3) ಮೆ: ಶಶಾಂಕ ನ್ಯೂಸ್ ಏಜೆನ್ಸಿ, ಮುನೇಶ್ವರ ಬ್ಲಾಕ್, ಬೆಂಗಳೂರು ಮತ್ತು 4) ಮೆ: ಲಿಖಿತಾ ಎಂಟರ್‌ಪ್ರೈಸಸ್, ಶಾಂತಿನಗರ, ಬೆಂಗಳೂರು, ಇವರುಗಳು ಸರ್ಕಾರಕ್ಕೆ ಟೆಂಡರನ್ನು ಸಲ್ಲಿಸಿರುತ್ತಾರೆ. ಈ ನಾಲ್ಕು ಗುತ್ತಿಗೆದಾರರ ಪೈಕಿ M/s Lohit Enterprises, No. 40A, BEML 3rd Stage Extn, Gattigere Layout, Rajarajeshwari Nagar, Bangalore-98, ಇವರು ಸರ್ಕಾರಕ್ಕೆ ಅತಿ ಹೆಚ್ಚಿನ ರಿಯಾಯಿತಿ ದರವನ್ನು (1.55%) ನೀಡುವಂತೆಯೂ ಮತ್ತು ರೂಪಾಯಿಗಳು ಐವತ್ತು ಸಾವಿರ ಮೊತ್ತದ ಹಣವನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ನೀಡಲು ಒಪ್ಪಿರುತ್ತಾರೆ. ಆದ್ದರಿಂದ ಇವರನ್ನು ಯಶಸ್ವಿ ಟೆಂಡರ್‌ದಾರರೆಂದು ಸರ್ಕಾರ ಪರಿಗಣಿಸಿದೆ ಮತ್ತು ದಿನಾಂಕ : 01-04-2012 ರಿಂದ 31-03-2013ರ ಅವಧಿಗೆ ಸಚಿವಾಲಯ ಗ್ರಂಥಾಲಯಕ್ಕೆ ಈ ಆದೇಶಕ್ಕೆ ಲಗತ್ತಿಸಲಾದ ತಃಖ್ತೆಯಲ್ಲಿ ನಮೂದಿಸಲಾದ ನಿಯತಕಾಲಿಕೆ/ದಿನಪತ್ರಿಕೆಗಳನ್ನು ಸರಬರಾಜು ಮಾಡಲು ಅನುಮತಿಯನ್ನು ನೀಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 01 ಸಗ್ರನಿ 2012, ಬೆಂಗಳೂರು ದಿನಾಂಕ : 06.03.2012.**

ಸಚಿವಾಲಯ ಗ್ರಂಥಾಲಯಕ್ಕೆ ದಿನಾಂಕ : 01-04-2012 ರಿಂದ 31-03-2013ರ ಅವಧಿಗೆ ನಿಯತಕಾಲಿಕೆ/ದಿನಪತ್ರಿಕೆಗಳ ಸರಬರಾಜುದಾರರಾದ M/s Lohit Enterprises, No. 40A, BEML 3rd Stage Extn, Gattigere Layout, Rajarajeshwari Nagar, Bangalore-98, ಇವರಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಮುಂಗಡವಾಗಿ ಹಣ ಪಾವತಿ ಮಾಡಿ ಇದಕ್ಕೆ ಲಗತ್ತಿಸಿರುವ ತಃಖ್ತೆಯಲ್ಲಿ ನಮೂದಿಸಿದಂತೆ ನಿಯತಕಾಲಿಕೆ/ದಿನಪತ್ರಿಕೆಗಳನ್ನು ತರಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ನಿಯತಕಾಲಿಕೆ/ದಿನಪತ್ರಿಕೆಗಳ ಖರೀದಿಗಾಗಿ ತಗಲುವ ವೆಚ್ಚವನ್ನು ಸಚಿವಾಲಯದ ಲೆಕ್ಕ ಶೀರ್ಷಿಕೆ "2052-00-090-0-01-051 ಸಾಮಾನ್ಯ ವೆಚ್ಚಗಳು" ರ ಅಡಿಯಲ್ಲಿ ಭರಿಸತಕ್ಕದ್ದು.

ಷರತ್ತುಗಳು :

1. ಸರಬರಾಜುದಾರರ ಪ್ರತಿ ಮೂರು ತಿಂಗಳಿಗೊಮ್ಮೆ ಮುಂಗಡ ಹಣವನ್ನು ಕ್ಲೈಮ್ ಮಾಡುವುದು.
2. ಸರಬರಾಜುದಾರರು ನಿಯತಕಾಲಿಕೆ/ದಿನಪತ್ರಿಕೆಗಳ ಮುಖ ಬೆಲೆಯ ಶೇಖಡ 1.55% ರಿಯಾಯಿತಿಯನ್ನು ಸರ್ಕಾರಕ್ಕೆ ಬಿಟ್ಟುಕೊಡುವುದು.
3. ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ತಿಂಗಳೊಳಗಾಗಿ ರೂ. 50,000/- (ರೂಪಾಯಿಗಳು ಐವತ್ತು ಸಾವಿರ ಮಾತ್ರ)ಗಳ ಮೊತ್ತದ ಬ್ಯಾಂಕ್ ಗ್ಯಾರಂಟಿಯನ್ನು ಸರ್ಕಾರಕ್ಕೆ ನೀಡುವುದು.
4. ನಿಯತಕಾಲಿಕೆಗಳನ್ನು ಮಾರುಕಟ್ಟೆಯಲ್ಲಿ ಬಿಡುಗಡೆಯಾದ ದಿನವೇ ಸರಬರಾಜು ಮಾಡತಕ್ಕದ್ದು. ಇಲ್ಲವಾದಲ್ಲಿ ಗ್ರಂಥಾಲಯದಿಂದಲೇ ಅವುಗಳನ್ನು ಮಾರುಕಟ್ಟೆಯಿಂದ ಖರೀದಿಸಲಾಗುವುದು ಹಾಗೂ ಅದಕ್ಕೆ ತಗಲುವ ವೆಚ್ಚವನ್ನು ಗುತ್ತಿಗೆದಾರರು ನೀಡಬೇಕಾಗಿರುತ್ತದೆ.
5. ನಿಯತಕಾಲಿಕೆ/ದಿನಪತ್ರಿಕೆಗಳನ್ನು ಸಕಾಲದಲ್ಲಿ ಸರಬರಾಜು ಮಾಡಲು ವಿಫಲವಾದಲ್ಲಿ, ಒಂದು ನೋಟೀಸನ್ನು ನೀಡಿದ ನಂತರ ಗುತ್ತಿಗೆಯನ್ನು ರದ್ದು ಮಾಡಲಾಗುವುದು ಹಾಗೂ ನಷ್ಟವಾದ ಮೊತ್ತವನ್ನು ಬ್ಯಾಂಕ್ ಗ್ಯಾರಂಟಿಯಿಂದ ವಸೂಲು ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ : 10-07-1996 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅನಂತ್ ಎನ್ ಕಾಸ್ಕರ್**

ಮುಖ್ಯ ಗ್ರಂಥಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಸಚಿವಾಲಯ ಗ್ರಂಥಾಲಯ

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 01 ಸಗ್ರನಿ 2012, ದಿನಾಂಕ : 06–03–2012ಕ್ಕೆ ಸಂಬಂಧಿಸಿದ**

**ತಖ್ತೆ:–1**

ಸಚಿವಾಲಯ ಗ್ರಂಥಾಲಯಕ್ಕೆ ದಿನಾಂಕ : 01–04–2012 ರಿಂದ 31–03–2013 ರವರೆಗೆ ಸರಬರಾಜು ಮಾಡಬೇಕಾಗಿರುವ ನಿಯತಕಾಲಿಕೆ ಹಾಗೂ ದಿನಪತ್ರಿಕೆಗಳ ವಿವರ

| ಕ್ರ.ಸಂ. | ನಿಯತಕಾಲಿಕೆಗಳ ಹೆಸರು | ಪ್ರತಿಗಳ ಸಂಖ್ಯೆ |
|---|---|---|
| 1. | AdMag | 2 |
| 2. | Alive | 4 |
| 3. | ಬಾಲಮಂಗಳ | 4 |
| 4. | ಬಾಲಮಿತ್ರ | 4 |
| 5. | ಭಾನುವಾರ | 4 |
| 6. | Business India | 2 |
| 7. | Business World | 2 |
| 8. | CHIP Intelligent Computing | 2 |
| 9. | Career | 2 |
| 10. | Capital Market | 2 |
| 11. | ಚಂಪಕ | 2 |
| 12. | Champak (Eng) | 4 |
| 13. | ಚಂದಮಾಮ | 4 |
| 14. | Chandamama (Eng) | 4 |
| 15. | Cine Blitz | 4 |
| 16. | Civil Services Chronicle | 4 |
| 17. | Competitions Success Review | 4 |
| 18. | Digit | 4 |
| 19. | Employment News | 4 |
| 20. | Femina | 4 |
| 21. | Filmfare | 4 |
| 22. | Frontline | 6 |
| 23. | General Knowledge Today | 4 |
| 24. | ಗೃಹಶೋಭ | 8 |
| 25. | Health & Nutrition | 4 |
| 26. | ಹಾಯ್ ಬೆಂಗಳೂರು | 6 |
| 27. | Indian Management | 2 |
| 28. | India Today | 6 |
| 29. | Inside Outside | 2 |
| 30. | ಕರ್ಮವೀರ | 8 |
| 31. | ಕಸ್ತೂರಿ | 6 |
| 32. | ಲಂಕೇಶ್ ಪತ್ರಿಕೆ | 8 |
| 33. | ಲಂಕೇಶ್ (ಗೌರಿ) | 4 |
| 34. | ಮಂಗಳ | 4 |
| 35. | ಮಯೂರ | 8 |
| 36. | Outlook | 6 |
| 37. | ಪ್ರಿಯಾಂಕ | 4 |
| 38. | Readers Digest | 4 |
| 39. | ರೂಪತಾರ | 6 |

| | | |
|---|---|---|
| 40. | Savvy | 4 |
| 41. | Screen | 4 |
| 42. | Society | 4 |
| 43. | Sports Star | 6 |
| 44. | Star Dust | 4 |
| 45. | Star Teller | 2 |
| 46. | ಸುಧಾ | 8 |
| 47. | ಸ್ಪರ್ಧಾ ಚೈತ್ರ | 4 |
| 48. | ಸ್ಪರ್ಧಾ ಸ್ಫೂರ್ತಿ | 4 |
| 49. | ಸ್ಪರ್ಧಾ ವಿಜೇತ | 4 |
| 50. | ಸ್ಪರ್ಧಾ ಜಗತ್ತು | 4 |
| 51. | ಸಂಜೀವಿನಿ | 4 |
| 52. | ತರಂಗ | 8 |
| 53. | ತುಂತುರು | 2 |
| 54. | The Week | 6 |
| 55. | Tinkle | 4 |
| 56. | ತುಷಾರ | 6 |
| 57. | Wisdom | 4 |
| 58. | Woman's Era | 6 |
| 59. | Ananda Vikatan (Tamil) | 1 |
| 60. | Swaathi (Telugu) | 1 |

**ತಖ್ತೆ–2**

**ದಿನಪತ್ರಿಕೆಗಳ ವಿವರ**

| ಕ್ರ.ಸಂ. | ದಿನಪತ್ರಿಕೆ ಹೆಸರು | ಪ್ರತಿಗಳ ಸಂಖ್ಯೆ |
|---|---|---|
| 1. | ಉದಯವಾಣಿ | 8 |
| 2. | ಕನ್ನಡ ಪ್ರಭ | 10 |
| 3. | ಪ್ರಜಾವಾಣಿ | 8 |
| 4. | ವಿಜಯ ಕರ್ನಾಟಕ | 8 |
| 5. | ಸಂಜೆ ವಾಣಿ | 6 |
| 6. | ಸಂಯುಕ್ತ ಕರ್ನಾಟಕ | 8 |
| 7. | ಹೊಸ ದಿಗಂತ | 4 |
| 8. | Bangalore Mirror | 4 |
| 9. | Business Line | 4 |
| 10. | Business Standard | 4 |
| 11. | Deccan Chronicle | 4 |
| 12. | Deccan Herald | 9 |
| 13. | DNA | 4 |
| 14. | Economic Times | 4 |
| 15. | Financial Express | 4 |
| 16. | Mint | 4 |
| 17. | New Indian Express | 8 |
| 18. | Times of India | 8 |
| 19. | The Hindu | 6 |

ಪಿ.ಆರ್. 898

## ಸಹಕಾರ ಸಚಿವಾಲಯ

**ವಿಷಯ :** ಸಿರಗುಪ್ಪ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ನಡೆದಿರುವ ಅವ್ಯವಹಾರಗಳಿಗೆ ಕಾರಣರಾದ ಅಧಿಕಾರಿ ಮತ್ತು ನೌಕರರ ವಿರುದ್ಧ ಶಿಸ್ತು ಕ್ರಮ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ರವರ ಪತ್ರ ಸಂಖ್ಯೆ : ಕೃಮಾಇ/271/ಸಿಬ್ಬಂದಿ–1(ಬಿ)/2007 ದಿನಾಂಕ : 20–10–2011.
2. ಸರ್ಕಾರದ ಆದೇಶ ಸಂಖ್ಯೆ : ಸಇ 140 ಮಾಇಸೇ 2008 ದಿನಾಂಕ : 14–07–2008.
3. ಇಲಾಖಾ ವಿಚಾರಣಾಧಿಕಾರಿಗಳ ವರದಿ ದಿನಾಂಕ : 14–12–2009.
4. ಸರ್ಕಾರದ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ : ಸಇ 140 ಮಾಇಸೇ (1 ರಿಂದ 10) 2008 ದಿನಾಂಕ : 09–02–2010 ಮತ್ತು ಅಧಿಕಾರಿ ನೌಕರರ ಲಿಖಿತ ಸಮಜಾಯಿಷಿ ಹೇಳಿಕೆಗಳು.
5. ಸರ್ಕಾರದ ಆದೇಶ ಸಂಖ್ಯೆ : ಸಇ 140 ಮಾಇಸೇ 2008 (ಭಾಗ) ದಿನಾಂಕ : 28–01–2011.
6. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ : ಕೃಮಾಇ/271/ಸಿಬ್ಬಂದಿ–1(ಬಿ) 2007 ದಿನಾಂಕ : 20–10–2001.
7. ಸರ್ಕಾರದ ಆದೇಶ ಸಂಖ್ಯೆ : ಸಇ 140 ಮಾಇಸೇ(2) 2008, ದಿನಾಂಕ : –02–2012.

**ಪ್ರಸ್ತಾವನೆ :**

ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವ್ಯಾಪ್ತಿಯಲ್ಲಿ ಭತ್ತ ಮತ್ತು ಅಕ್ಕಿ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯಾಪಾರ ವ್ಯವಹಾರದಲ್ಲಿ ಸಾಗಾಣಿಕೆ, ಪರ್ಮಿಟ್ ಪುಸ್ತಕಗಳ ದುರ್ಬಳಕೆ, ಮಾರುಕಟ್ಟೆ ಶುಲ್ಕ ವಸೂಲಿ ಮಾಡಲು ಕ್ರಮ ಕೈಗೊಳ್ಳದೇ ಇರುವುದು, ಪರ್ಮಿಟ್ ಲೆಕ್ಕ ಪುಸ್ತಕಗಳನ್ನು ಆಡಿಟ್ ತಪಾಸಣೆಗೆ ಒದಗಿಸದೇ ಇರುವುದು ಮುಂತಾದ ಅವ್ಯವಹಾರಗಳಿಂದಾಗಿ 2003–04 ರಿಂದ 2006–07ನೇ ಸಾಲಿನವರೆಗೆ ಸಮಿತಿಗೆ ಆರ್ಥಿಕ ನಷ್ಟ ಉಂಟು ಮಾಡಿರುವುದಾಗಿ ವಿಶೇಷ ಲೆಕ್ಕಪರಿಶೋಧಕರು, ಕೃಷಿ ಮಾರಾಟ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. ಇವರು ಸಲ್ಲಿಸಿದ ಲೆಕ್ಕಪರಿಶೋಧನಾ ವರದಿಯಲ್ಲಿ ಸಿರಗುಪ್ಪ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ ಈ ಕೆಳಕಂಡ ಅಧಿಕಾರಿ ಮತ್ತು ನೌಕರರು ಕಾರಣರಾಗಿರುವುದರಿಂದ ಸದರಿ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವಂತೆ ಕೋರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

| ಕ್ರ.ಸಂ. | ಅಧಿಕಾರಿ/ನೌಕರರ ಹೆಸರು ಶ್ರೀಯುತರು | ಶಿರಗುಪ್ಪ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ ಹುದ್ದೆ |
|---|---|---|
| 1 | ಆರ್. ತಿಪ್ಪೆಸ್ವಾಮಿ | ಕಾರ್ಯದರ್ಶಿ |
| 2 | ಎಲ್. ಅಮರೇಶ್ | ಸಹಾಯಕ ಕಾರ್ಯದರ್ಶಿ ಮತ್ತು ಕಾರ್ಯದರ್ಶಿ |
| 3 | ಪಿ.ಟಿ. ವಿರೂಪಾಕ್ಷಪ್ಪ | ಕಾರ್ಯದರ್ಶಿ |
| 4 | ಎಸ್. ಮಲ್ಲಿಕಾರ್ಜುನ | ಪ್ರಥಮ ದರ್ಜೆ ಸಹಾಯಕ ಮತ್ತು ಸಹಾಯಕ ಕಾರ್ಯದರ್ಶಿ |
| 5 | ಮುತ್ತಣ್ಣ | ಲೆಕ್ಕಿಗರು |
| 6 | ಮುರ್ತುಜಾಸಾಬ್ | ಲೆಕ್ಕಿಗರು ದರ್ಜೆ–2 |
| 7 | ಬಿ. ಲಕ್ಷ್ಮೀನಾರಾಯಣ | ಆಂತರಿಕ ಲೆಕ್ಕ ಪರಿಶೋಧಕರು |
| 8 | ಕೆ. ಮನೋಹರ | ಆಂತರಿಕ ಲೆಕ್ಕ ಪರಿಶೋಧಕರು |
| 9 | ಶಾಮಣ್ಣ | ಮಾರಾಟ ಸಹಾಯಕರು |
| 10 | ಶ್ರೀಮಂತ ಏಡ್ಡಿ | ಮಾರಾಟ ಸಹಾಯಕರು |
| 11 | ವಲೀಭಾಷಾ | ಮಾರಾಟ ಸಹಾಯಕರು |
| 12 | ಹೆಚ್. ಪ್ರತಾಪ್ ಗೌಡ | ದ್ವಿತೀಯ ದರ್ಜೆ ಸಹಾಯಕರು |

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ 2003–04 ರಿಂದ 2006–07ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಸಮಿತಿಗೆ ಆರ್ಥಿಕ ನಷ್ಟ ಉಂಟಾಗಲು ಕಾರಣರಾದ ಮೇಲಿನ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು ನಿಯಮ 1957ರ ನಿಯಮ 13ರ ಅನ್ವಯ ವಿಚಾರಣಾಧಿಕಾರಿಯಾಗಿ ಶ್ರೀ ಕೆ.ಎನ್. ನಾಗೇಂದ್ರ ಕುಮಾರ್ ನಿವೃತ್ತ ಜಿಲ್ಲಾ ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ನೇಮಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಗಳು ಪ್ರಕರಣದ ವಿಚಾರಣೆಯನ್ನು ಪೂರ್ಣಗೊಳಿಸಿ ವಿಚಾರಣಾ ವರದಿಯನ್ನು ದಿನಾಂಕ : 14–12–2009 ರಂದು ಸರ್ಕಾರಕ್ಕೆ ಸಲ್ಲಿಸಿದ್ದು ವಿಚಾರಣಾ ವರದಿಯಲ್ಲಿ ಮೇಲ್ಕಂಡ ಆರೋಪಿತ ಅಧಿಕಾರಿ/ನೌಕರರ ಪೈಕಿ ಕ್ರಮ ಸಂಖ್ಯೆ : 2 ಮತ್ತು 3 ರಲ್ಲಿರುವ ಶ್ರೀ ಎಲ್. ಅಮರೇಶ್ ಮತ್ತು ಶ್ರೀ ಪಿ.ಟಿ. ವಿರೂಪಾಕ್ಷಪ್ಪ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಮತ್ತು ಉಳಿದಂತೆ ಕ್ರಮ ಸಂಖ್ಯೆ 1, 4 ರಿಂದ 12 ವರೆಗಿನ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ರುಜುವಾತಾಗಿರುವುದಾಗಿ ವಿಚಾರಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ.

ವಿಚಾರಣಾ ವರದಿಯಲ್ಲಿ ಆರೋಪಗಳು ರುಜುವಾತಾಗಿರುವ ಅಧಿಕಾರಿ/ನೌಕರರಿಗೆ 2ನೇ ಕಾರಣ ಕೇಳುವ ನೋಟೀಸಿನೊಂದಿಗೆ ಇಲಾಖಾ ವಿಚಾರಣೆಯ ಅಂತಿಮ ವರದಿಯ ಯಥಾ ಪ್ರತಿಯನ್ನು ಕಳುಹಿಸಿ ಅವರ ಲಿಖಿತ ಪ್ರತಿಪಾದನಾ ಹೇಳಿಕೆಯನ್ನು ನೀಡುವಂತೆ ಮೇಲೆ (4)ರಲ್ಲಿ ಓದಲಾದ ನೋಟೀಸಿನಲ್ಲಿ ಸೂಚಿಸಲಾಗಿತ್ತು. ಅದರಂತೆ ಎಲ್ಲಾ ಆರೋಪಿತ ಅಧಿಕಾರಿ/ನೌಕರರು ತಮ್ಮ ಲಿಖಿತ ಪ್ರತಿಪಾದನಾ ಹೇಳಿಕೆಯನ್ನು ಸಲ್ಲಿಸಿ, ವಿಚಾರಣಾ ಪ್ರಾಧಿಕಾರವು ನೀಡಿರುವ ವರದಿಯನ್ನು ಒಪ್ಪಬಾರದಾಗಿ ವಿವರಿಸುತ್ತಾ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಅವ್ಯವಹಾರಗಳಿಗೆ ಕಾರಣರಾದ ಮತ್ತು ಜಂಟಿ ವಿಚಾರಣೆಗೆ ಒಳಪಡಿಸಲಾಗಿದ್ದ ಒಟ್ಟು 12 ಅಧಿಕಾರಿಗಳ ಪೈಕಿ, 12ನೇ ಆರೋಪಿಯಾಗಿದ್ದ ಶ್ರೀ ಹೆಚ್. ಪ್ರತಾಪ್ ಗೌಡ ದ್ವಿತೀಯ ದರ್ಜೆ ಸಹಾಯಕ ಇವರು ದಿನಾಂಕ : 25-08-2010 ರಂದು ನಿಧನ ಹೊಂದಿರುವುದಾಗಿ ಇಲಾಖೆಯ ಪತ್ರ ಸಂಖ್ಯೆ : ಕೃಮಾಇ 271 ಸಿಬ್ಬಂದಿ-1(ಬಿ) 2007 ದಿನಾಂಕ : 04-12-2010ರ ವರದಿಯ ಆಧಾರದ ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಪ್ರಕರಣದ 12ನೇ ಆರೋಪಿಯಾದ ಶ್ರೀ ಹೆಚ್. ಪ್ರತಾಪ್ ಗೌಡ ದ್ವಿತೀಯ ದರ್ಜೆ ಸಹಾಯಕರು ಇವರ ವಿರುದ್ಧದ ಆರೋಪಗಳು ವಿಚಾರಣೆ ಹಾಗೂ ಶಿಸ್ತು ಕ್ರಮ ತೆಗೆದುಕೊಳ್ಳುವ ಅಗತ್ಯತೆ ಇಲ್ಲದೇ ಇರುವುದರಿಂದ ಇವರ ವಿರುದ್ಧದ ವಿಚಾರಣೆಯನ್ನು ಕೈಬಿಡಲಾಗಿದೆ.

ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ಶಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ 2003-04 ರಿಂದ 2006-07ನೇ ಸಾಲಿನ ಪರ್ಮಿಟ್ ಪುಸ್ತಕಗಳು ದುರುಪಯೋಗವಾಗಿರುವುದು ದೃಢಪಟ್ಟಿರುವುದರಿಂದ ಇಲಾಖಾ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಅವರುಗಳ ವಿರುದ್ಧದ ಆರೋಪಗಳು ಸಾಬೀತಾಗಿದ್ದು ಆ ಅಧಿಕಾರಿ/ನೌಕರರ ವಿರುದ್ಧ ಪುನರ್ ವಿಚಾರಣೆ ಅವಶ್ಯಕತೆ ಇರುವುದಿಲ್ಲವೆಂದು ಅವರುಗಳಿಗೆ ದಂಡನೆ ನಿಗದಿಪಡಿಸಬಹುದೆಂದು ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಮೇಲೆ (7)ರಲ್ಲಿ ಓದಲಾದ ದಿನಾಂಕ : 28-02-2012ರ ಆದೇಶದಲ್ಲಿ ಕ್ರಮ ಸಂಖ್ಯೆ : 2 ಮತ್ತು 3 ರಲ್ಲಿನ ಶ್ರೀ ಎಲ್. ಅಮರೇಶ್ ಮತ್ತು ಶ್ರೀ ಪಿ.ಟಿ. ವಿರೂಪಾಕ್ಷಪ್ಪ ಇವರುಗಳನ್ನು ಆರೋಪ ಮುಕ್ತಗೊಳಿಸಿ ಆದೇಶ ಹೊರಡಿಸಿದೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಿದ ನಂತರ ಶಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ 2003-04 ರಿಂದ 2006-07ನೇ ಸಾಲಿನವರೆಗೆ ಪರ್ಮಿಟ್ ಪುಸ್ತಕಗಳ ಅವ್ಯವಹಾರಗಳಿಂದಾಗಿ ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಆರ್ಥಿಕ ನಷ್ಟ ಉಂಟಾಗಲು ಕಾರಣರಾದ ಕ್ರಮ ಸಂಖ್ಯೆ 1, 4 ರಿಂದ 11ವರೆಗಿನ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ರುಜುವಾತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 ರನ್ವಯ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಇ 140 ಮಾಇಸೇ (1) 2008 ಬೆಂಗಳೂರು, ದಿನಾಂಕ : 28.02.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ 2003-04 ರಿಂದ 2006-07ನೇ ಸಾಲಿನಲ್ಲಿ ಆರ್ಥಿಕ ನಷ್ಟಕ್ಕೆ ಕಾರಣರಾದವರ ಈ ಕೆಳಕಂಡ ಅಧಿಕಾರಿ ಮತ್ತು ನೌಕರರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 ರನ್ವಯ ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಂಡನೆಯನ್ನು ವಿಧಿಸಲು ಆದೇಶಿಸಿದೆ.

| ಕ್ರ.ಸಂ. | ಹೆಸರು ಪದನಾಮ ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀಯುತರು | ವಿಧಿಸಿರುವ ದಂಡನೆ |
|---|---|---|
| 1 | ಆರ್. ತಿಪ್ಪೇಸ್ವಾಮಿ<br>ಕಾರ್ಯದರ್ಶಿ,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿರಾ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iii) ರನ್ವಯ<br>1. ಸಂಚಿತ ಪರಿಣಾಮ ಸಹಿತ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ತಡೆಹಿಡಿಯುವುದು.<br>2. ಆರ್ಥಿಕ ನಷ್ಟ ಮೊತ್ತು ರೂ. 10.44,982-00ನ್ನು ವಸೂಲಾತಿ ಮಾಡುವುದು. |
| 2 | ಎಸ್. ಮಲ್ಲಿಕಾರ್ಜುನ<br>ಹಿರಿಯ ಮಾರುಕಟ್ಟೆ ಮೇಲ್ವಿಚಾರಕ<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ತಿಪಟೂರು | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(ii) ರನ್ವಯ ವಾಗ್ದಂಡನೆ ವಿಧಿಸಿದೆ. |
| 3 | ಮುತ್ತಣ್ಣ<br>ಲೆಕ್ಕಿಗರು ದರ್ಜೆ-2<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿರಗುಪ್ಪ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iv-ಕ) ರನ್ವಯ<br>1. ಪ್ರಸ್ತುತ ಇರುವ ಕಾಲಿಕ ವೇತನದ ಒಂದು ಹಂತದಿಂದ ಕೆಳಗೆ ಇಳಿಸುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 10,27,651-00ನ್ನು ವಸೂಲಾತಿ ಮಾಡುವುದು. |
| 4 | ಮುರ್ತುಜಾಸಾಬ್<br>ಪ್ರಥಮ ದರ್ಜೆ ಸಹಾಯಕರು<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬೆಂಗಳೂರು | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iv-ಕ) ರನ್ವಯ<br>1. ಪ್ರಸ್ತುತ ಇರುವ ಕಾಲಿಕ ವೇತನದ ಒಂದು ಹಂತದಿಂದ ಕೆಳಗೆ ಇಳಿಸುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 25,25,382-00ನ್ನು ವಸೂಲಾತಿ ಮಾಡುವುದು. |
| 5 | ಟಿ. ಲಕ್ಷ್ಮೀನಾರಾಯಣ<br>ಪ್ರಥಮ ದರ್ಜೆ ಸಹಾಯಕರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಳ್ಳಾರಿ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iv-ಕ) ರನ್ವಯ<br>1. ಪ್ರಸ್ತುತ ಇರುವ ಕಾಲಿಕ ವೇತನದ ಒಂದು ಹಂತದಿಂದ ಕೆಳಗೆ ಇಳಿಸುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 25,25,382-00ನ್ನು ವಸೂಲಾತಿ ಮಾಡುವುದು. |
| 6 | ಕೆ. ಮನೋಹರ<br>ಆಂತರಿಕ ಲೆಕ್ಕ ಪರಿಶೋಧಕರು, ದರ್ಜೆ-2, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿರಗುಪ್ಪ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iii) ರನ್ವಯ<br>1. ಸಂಚಿತ ಪರಿಣಾಮ ಸಹಿತ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 10.27,651-00ನ್ನು ವಸೂಲಾತಿ ಮಾಡುವುದು. |

| | | |
|---|---|---|
| 7 | ಶಾಮಣ್ಣ<br>ಮಾರಾಟ ಸಹಾಯಕರು<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iii) ರನ್ವಯ<br>1. ಸಂಚಿತ ಪರಿಣಾಮ ಸಹಿತ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 24,53,739-00ನ್ನು ವಸೂಲಾತಿ ಮಾಡುವುದು. |
| 8 | ಶ್ರೀಮಂತ ಏಡ್ಡಿ<br>ಮಾರಾಟ ಸಹಾಯಕರು<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿರಗುಪ್ಪ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iii) ರನ್ವಯ<br>1. ಸಂಚಿತ ಪರಿಣಾಮ ಸಹಿತ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 35,56,033-00ನ್ನು ವಸೂಲಾತಿ ಮಾಡುವುದು. |
| 9 | ವಲೀಭಾಷಾ<br>ಮಾರಾಟ ಸಹಾಯಕರು<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿರಗುಪ್ಪ | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iii) ರನ್ವಯ<br>1. ಸಂಚಿತ ಪರಿಣಾಮ ಸಹಿತ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವುದು.<br>2. ಆರ್ಥಿಕ ನಷ್ಟ ಮೊತ್ತ ರೂ. 35,56,033-00ನ್ನು ವಸೂಲಾತಿ ಮಾಡುವುದು. |

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ಸದರಿ ಆದೇಶವನ್ನು ಅನುಷ್ಠಾನಗೊಳಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 899

**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಸಿರಗುಪ್ಪ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ನಡೆದಿರುವ ಅವ್ಯವಹಾರಗಳಿಗೆ ಕಾರಣರಾದ ಅಧಿಕಾರಿ ಮತ್ತು ನೌಕರರ ವಿರುದ್ಧ ಶಿಸ್ತು ಕ್ರಮ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ರವರ ಪತ್ರ ಸಂಖ್ಯೆ : ಕೃಮಾಇ/271/ಸಿಬ್ಬಂದಿ-1(ಬಿ)/2007 ದಿನಾಂಕ : 20-10-2011.
2. ಸರ್ಕಾರದ ಆದೇಶ ಸಂಖ್ಯೆ : ಸಇ 140 ಮಾಇಸೇ 2008 ದಿನಾಂಕ : 14-07-2008.
3. ಇಲಾಖಾ ವಿಚಾರಣಾಧಿಕಾರಿಗಳ ವರದಿ ದಿನಾಂಕ : 14-12-2009.
4. ಸರ್ಕಾರದ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ : ಸಇ 140 ಮಾಇಸೇ (1 ರಿಂದ 10) 2008 ದಿನಾಂಕ : 09-02-2010 ಮತ್ತು ಅಧಿಕಾರಿ ನೌಕರರ ಲಿಖಿತ ಸಮಜಾಯಿಷಿ ಹೇಳಿಕೆಗಳು.

**ಪ್ರಸ್ತಾವನೆ :**

ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವ್ಯಾಪ್ತಿಯಲ್ಲಿ ಭತ್ತ ಮತ್ತು ಅಕ್ಕಿ ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯಾಪಾರ ವ್ಯವಹಾರದಲ್ಲಿ ಸಾಗಾಣಿಕೆ, ಪರ್ಮಿಟ್ ಪುಸ್ತಕಗಳ ದುರ್ಬಳಕೆ, ಮಾರುಕಟ್ಟೆ ಶುಲ್ಕ ವಸೂಲಿ ಮಾಡಲು ಕ್ರಮ ಕೈಗೊಳ್ಳದೇ ಇರುವುದು, ಪರ್ಮಿಟ್ ಲೆಕ್ಕ ಪುಸ್ತಕಗಳನ್ನು ಆಡಿಟ್ ತಪಾಸಣೆಗೆ ಒದಗಿಸದೇ ಇರುವುದು ಮುಂತಾದ ಅವ್ಯವಹಾರಗಳಿಂದಾಗಿ 2003-04 ರಿಂದ 2006-07ನೇ ಸಾಲಿನವರೆಗೆ ಸಮಿತಿಗೆ ಆರ್ಥಿಕ ನಷ್ಟ ಉಂಟು ಮಾಡಿರುವುದಾಗಿ ವಿಶೇಷ ಲೆಕ್ಕಪರಿಶೋಧಕರು, ಕೃಷಿ ಮಾರಾಟ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರು ಸಲ್ಲಿಸಿದ ಲೆಕ್ಕಪರಿಶೋಧನಾ ವರದಿಯಲ್ಲಿ ಸಿರಗುಪ್ಪ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ ಈ ಕೆಳಕಂಡ ಅಧಿಕಾರಿ ಮತ್ತು ನೌಕರರು ಕಾರಣರಾಗಿರುವುದರಿಂದ ಸದರಿ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವಂತೆ ಕೋರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

| ಕ್ರ.ಸಂ. | ಅಧಿಕಾರಿ/ನೌಕರರ ಹೆಸರು ಶ್ರೀಯುತರು | ಶಿರಗುಪ್ಪ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ ಹುದ್ದೆ |
|---|---|---|
| 1 | ಆರ್. ತಿಪ್ಪೆಸ್ವಾಮಿ | ಕಾರ್ಯದರ್ಶಿ |
| 2 | ಎಲ್. ಅಮರೇಶ್ | ಸಹಾಯಕ ಕಾರ್ಯದರ್ಶಿ ಮತ್ತು ಕಾರ್ಯದರ್ಶಿ |
| 3 | ಪಿ.ಟಿ. ವಿರೂಪಾಕ್ಷಪ್ಪ | ಕಾರ್ಯದರ್ಶಿ |
| 4 | ಎಸ್. ಮಲ್ಲಿಕಾರ್ಜುನ | ಪ್ರಥಮ ದರ್ಜೆ ಸಹಾಯಕರಾಗಿ ಮತ್ತು ಸಹಾಯಕ ಕಾರ್ಯದರ್ಶಿ |
| 5 | ಮುತ್ತಣ್ಣ | ಲೆಕ್ಕಿಗರು |
| 6 | ಮುರ್ತುಜಾಸಾಬ್ | ಲೆಕ್ಕಿಗರು ದರ್ಜೆ-2 |
| 7 | ಬಿ. ಲಕ್ಷ್ಮೀನಾರಾಯಣ | ಆಂತರಿಕ ಲೆಕ್ಕ ಪರಿಶೋಧಕರು |
| 8 | ಕೆ. ಮನೋಹರ | ಆಂತರಿಕ ಲೆಕ್ಕ ಪರಿಶೋಧಕರು |
| 9 | ಶಾಮಣ್ಣ | ಮಾರಾಟ ಸಹಾಯಕರು |
| 10 | ಶ್ರೀಮಂತ ಏಡ್ಡಿ | ಮಾರಾಟ ಸಹಾಯಕರು |
| 11 | ವಲೀಭಾಷಾ | ಮಾರಾಟ ಸಹಾಯಕರು |
| 12 | ಹೆಚ್. ಪ್ರತಾಪ್ ಗೌಡ | ದ್ವಿತೀಯ ದರ್ಜೆ ಸಹಾಯಕರು |

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ 2003–04 ರಿಂದ 2006–07ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಸಮಿತಿಗೆ ಆರ್ಥಿಕ ನಷ್ಟ ಉಂಟಾಗಲು ಕಾರಣರಾದ ಮೇಲಿನ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು ನಿಯಮ 1957ರ ನಿಯಮ 13ರ ಅನ್ವಯ ವಿಚಾರಣಾಧಿಕಾರಿಯಾಗಿ ಶ್ರೀ ಕೆ.ಎನ್. ನಾಗೇಂದ್ರ ಕುಮಾರ್ ನಿವೃತ್ತ ಜಿಲ್ಲಾ ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ನೇಮಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಗಳು ಪ್ರಕರಣದ ವಿಚಾರಣೆಯನ್ನು ಪೂರ್ಣಗೊಳಿಸಿ ವಿಚಾರಣಾ ವರದಿಯನ್ನು ದಿನಾಂಕ : 14–12–2009 ರಂದು ಸರ್ಕಾರಕ್ಕೆ ಸಲ್ಲಿಸಿದ್ದು ವಿಚಾರಣಾ ವರದಿಯಲ್ಲಿ ಮೇಲ್ಕಂಡ ಆರೋಪಿತ ಅಧಿಕಾರಿ/ನೌಕರರ ಪೈಕಿ ಕ್ರಮ ಸಂಖ್ಯೆ : 2 ಮತ್ತು 3 ರಲ್ಲಿರುವ ಶ್ರೀ ಎಲ್. ಅಮರೇಶ್, ಮತ್ತು ಶ್ರೀ ಪಿ.ಟಿ. ವಿರೂಪಾಕ್ಷಪ್ಪ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಮತ್ತು ಉಳಿದಂತೆ ಕ್ರಮ ಸಂಖ್ಯೆ 1, 4 ರಿಂದ 12 ವರೆಗಿನ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ರುಜುವಾತಾಗಿರುವುದಾಗಿ ವಿಚಾರಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಿದ ನಂತರ ಶಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ 2003–04 ರಿಂದ 2006–07ನೇ ಸಾಲಿನವರೆಗೆ ಪರ್ಮಿಟ್ ಪುಸ್ತಕಗಳು ದುರುಪಯೋಗವಾಗಿ ಸಮಿತಿಗೆ ಆರ್ಥಿಕ ನಷ್ಟ ಉಂಟಾಗಲು ಕಾರಣರಾದ ಪ್ರಕರಣದಲ್ಲಿ ಕ್ರಮ ಸಂಖ್ಯೆ 2 ಮತ್ತು 3 ರಲ್ಲಿನ ಶ್ರೀ ಎಲ್. ಅಮರೇಶ್ ಕಾರ್ಯದರ್ಶಿ ಮತ್ತು ಶ್ರೀ ಪಿ.ಟಿ. ವಿರೂಪಾಕ್ಷಪ್ಪ, ಸಹಾಯಕ ಕಾರ್ಯದರ್ಶಿ ಇವರುಗಳ ವಿರುದ್ಧದ ಆರೋಪಗಳು ರುಜುವಾತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ತಿಳಿಸಿರುವುದರಿಂದ ಅವರುಗಳನ್ನು ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 140 ಮಾಇಸೇ (2) 2008 ಬೆಂಗಳೂರು, ದಿನಾಂಕ : 28.02.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸಿರಗುಪ್ಪ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ 2003–04 ರಿಂದ 2006–07ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಲ್ಲಿ ಸಮಿತಿಗೆ ಆರ್ಥಿಕ ನಷ್ಟ ಉಂಟಾಗಿರುವ ಬಗ್ಗೆ ಮಾಡಲಾದ ಆರೋಪವು ಶ್ರೀ ಎಲ್. ಅಮರೇಶ, ಅಂದಿನ ಕಾರ್ಯದರ್ಶಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸಿರಗುಪ್ಪ ಮತ್ತು ಶ್ರೀ ಪಿ.ಟಿ. ವಿರೂಪಾಕ್ಷಪ್ಪ, ಅಂದಿನ ಸಹಾಯಕ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸಿರಗುಪ್ಪ ಇವರುಗಳ ವಿರುದ್ಧದ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗದೇ ಇರುವುದನ್ನು ಪರಿಗಣಿಸಿ ಇವರುಗಳನ್ನು ಆರೋಪ ಮುಕ್ತಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 900

**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

## PERSONNEL AND ADMINISTRATIVE REFORMS SECRETARIAT

**ADDENDUM**

**No: DPAR. 104.HGG: 2011, Bangalore, Dated: 05.03.2012.**

In the guidelines governing the extension of State Hospitality to the visiting dignitaries appended to the Government Order No: DPAR 554 HGG 2005, dt: 22-04-2006, Under the head State Guests below the words Chief Election Commissioner appearing in Sl. No. 10 at para 10 (a), the following shall be inserted.

10(a) Election Commissioners of India

By Order and in the name of the Governor of Karnataka

**Padmaraju**
P.R.901
Under Secretary to Government
D.P.A.R(State Protocol).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ವಿಧೇಯಕ 2011ನ್ನು ಅನುಷ್ಠಾನಗೊಳಿಸಲು ಸಕಾಲ ಮಿಷನ್‌ಗಾಗಿ ಮ್ಯಾನೇಜ್‌ಮೆಂಟ್ ಸಮಾಲೋಚಕರನ್ನು ಹಾಗೂ ಐ.ಟಿ. ಸಮಾಲೋಚಕರನ್ನು ಆಯ್ಕೆ ಮಾಡಲು ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 39 ಶಾಸನ 2011, ದಿನಾಂಕ: 02/01/2012.
2. ಅಧಿಸೂಚನೆ ಸಂಖ್ಯೆ: ಸಿಆಸುಇ 04 ಇಕಾಅ 2012, ದಿನಾಂಕ: 14/02/2012.
3. ಅಧಿಸೂಚನೆ ಸಂಖ್ಯೆ: ಸಿಆಸುಇ 28 ಇಕಾಅ 2012, ದಿನಾಂಕ: 27/02/2012.
4. ಅಧಿಸೂಚನೆ ಸಂಖ್ಯೆ: ಸಿಆಸುಇ 04 ಇಕಾಅ 2012, ದಿನಾಂಕ: 01/03/2012.
5. ಆದೇಶ ಸಂಖ್ಯೆ: ಸಿಆಸುಇ 20 ಇಕಾಅ 2012, ದಿನಾಂಕ 06–03–2012.
6. ಆದೇಶ ಸಂಖ್ಯೆ: ಸಿಆಸುಇ 66 ಇಕಾಅ 2012, ದಿನಾಂಕ 13–03–2012.

**ಪ್ರಸ್ತಾವನೆ :**

11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಯನ್ನು ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ವನ್ನು ರಾಜ್ಯ ಶಾಸನ ಸಭೆಯು ಸರ್ವಾನುಮತದಿಂದ ಅಂಗೀಕರಿಸಿತು. ಸಾರ್ವಜನಿಕರಿಗೆ ಸರ್ಕಾರಿ ಅಧಿಕಾರಿಗಳ ಹೊಣೆಗಾರಿಕೆಯನ್ನು ಖಾತರಿಪಡಿಸುವ ಮೂಲಕ ಸುಧಾರಿತ ಸೇವೆಯನ್ನು ನೀಡುವುದು ಈ ಅಧಿನಿಯಮದ ಮುಖ್ಯ ಉದ್ದೇಶವಾಗಿದೆ. ಇದು

ಆಡಳಿತದಲ್ಲಿ ಹೆಚ್ಚಿನ ಪಾರದರ್ಶಕತೆ ಹಾಗೂ ದಕ್ಷತೆಯನ್ನು ತರುವುದಲ್ಲದೇ ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಕುಂದುಕೊರತೆ ಹಾಗೂ ಭ್ರಷ್ಟ ಪದ್ಧತಿಗಳನ್ನು ಕಡಿಮೆ ಮಾಡುತ್ತದೆ.

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 02/01/2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಮಸೂದೆಯನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಭಾಗ IV-A ಯಲ್ಲಿ ಪ್ರಕಟಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ದಿನಾಂಕ: 14/02/2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಕರಡು ನಿಯಮಗಳ ಬಗ್ಗೆ ಸಾರ್ವಜನಿಕರಿಂದ ಆಕ್ಷೇಪಣೆ /ಸಲಹೆಗಳನ್ನು ಆಹ್ವಾನಿಸಿ 15 ದಿನಗಳ ಕಾಲಾವಕಾಶ ನೀಡಿ ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ನಿಯಮಗಳು 2012ನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯ ಭಾಗ IV-A ನಲ್ಲಿ ದಿನಾಂಕ: 01/03/2012 ರಂದು ಪ್ರಕಟಿಸಿ ಜಾರಿಗೊಳಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು ಪೈಲೆಟ್ ಲಾಂಚ್ ಮಾಡಿದ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಾಯಕ ಕಂದಾಯ ಅಧಿಕಾರಿಗಳ ಕಛೇರಿ, ಬೆಂಗಳೂರು ಇವುಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011ನ್ನು ದಿನಾಂಕ: 01/03/2012 ರಿಂದ ಜಾರಿಗೆ ತರಲಾಗಿದೆ.

ಮೇಲೆ ಓದಲಾದ ಉಲ್ಲೇಖ (5) ರಲ್ಲಿ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011ಅನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರೂ. 5.00 ಕೋಟಿಗಳ ವೆಚ್ಚದಲ್ಲಿ ಕೆಲವು ಅಧಿಕಾರಿ ಸಿಬ್ಬಂದಿಯೊಂದಿಗೆ ಸಕಾಲ ಮಂಡಳಿ (ಮಿಷನ್ ಮೋಡ್) ಯನ್ನು ರಚಿಸಿ ದಿನಾಂಕ: 06/03/2012 ರಂದು ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (6)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011 ರ ಅನುಸೂಚಿಯಲ್ಲಿ ವಿವರಿಸಿರುವ 11 ಇಲಾಖೆಗಳ ವ್ಯಾಪ್ತಿಗೆ ಬರುವ ಅಧಿಸೂಚಿತ ಸೇವೆಗಳನ್ನು ಕಾಲಮಿತಿಯೊಳಗೆ ನಾಗರೀಕರಿಗೆ ಒದಗಿಸಲು ಜಿಲ್ಲಾ ಮಟ್ಟದಲ್ಲಿ ಎಲ್ಲಾ 11 ಇಲಾಖೆಗಳೊಂದಿಗೆ ಸಮನ್ವಯ, ಉಸ್ತುವಾರಿ ಮತ್ತು ಪರಿಶೀಲನೆಯನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿಯನ್ನು ರಚಿಸಿ ಸರ್ಕಾರದ ಮಂಜೂರಾತಿ ನೀಡಲಾಗಿದೆ:

"ಸಕಾಲ ಮಿಷನ್" ಗಾಗಿ ಮ್ಯಾನೇಜ್‌ಮೆಂಟ್ ಸಮಾಲೋಚಕರು ಹಾಗೂ ಐ.ಟಿ. ಸಮಾಲೋಚಕರ ಅಗತ್ಯವಿದ್ದು, ಇವರನ್ನು ಆಯ್ಕೆ ಮಾಡುವ ಸಲುವಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಎರಡು ಸಮಿತಿಯನ್ನು ರಚಿಸಲು ಉದ್ದೇಶಿಸಿದೆ.

**ಮ್ಯಾನೇಜ್‌ಮೆಂಟ್ ಸಮಾಲೋಚಕರನ್ನು ಆಯ್ಕೆ ಮಾಡಲು ಈ ಕೆಳಕಂಡ ಸಮಿತಿ:-**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಡಳಿತ ಸುಧಾರಣೆ)
2. ಆಯುಕ್ತರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ
3. ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಆಸುಇ (ಸೇವೆಗಳು)
4. ಶ್ರೀ ಶ್ರೀಧರ್ ಪಬ್ಬಿಸೆಟ್ಟಿ, ಚೀಫ್ ಆಪರೇಟಿಂಗ್ ಆಫೀಸರ್, ಸೆಂಟರ್ ಫಾರ್ ಪಬ್ಲಿಕ್ ಪಾಲಿಸಿ, ಐಐಎಂಬಿ
5. ನಿರ್ದೇಶಕರು, ವಿತ್ತೀಯ ನೀತಿ ಸಂಸ್ಥೆ, ಬೆಂಗಳೂರು

**ಹಾಗೂ ಐ.ಟಿ. ಸಮಾಲೋಚಕರನ್ನು ಆಯ್ಕೆ ಮಾಡಲು ಈ ಕೆಳಕಂಡ ಸಮಿತಿ:-**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಡಳಿತ ಸುಧಾರಣೆ)
2. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಸಿಇಜಿ, ಸಿಆಸುಇ (ಇ-ಆಡಳಿತ)
3. ಆಯಕ್ತರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ
4. ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಆಸುಇ (ಸೇವೆಗಳು)
5. ನಿರ್ದೇಶಕರು, ವಿತ್ತೀಯ ನೀತಿ ಸಂಸ್ಥೆ, ಬೆಂಗಳೂರು

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 70 ಇಕಾಅ 2012 ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2012.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ಅನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡಂತೆ ಎರಡು ಸಮಿತಿಗಳನ್ನು ರಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಮ್ಯಾನೇಜ್‌ಮೆಂಟ್ ಸಮಾಲೋಚಕರನ್ನು ಆಯ್ಕೆ ಮಾಡಲು ಈ ಕೆಳಕಂಡ ಸಮಿತಿ:-**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಡಳಿತ ಸುಧಾರಣೆ)
2. ಆಯುಕ್ತರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ
3. ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಆಸುಇ (ಸೇವೆಗಳು)
4. ಶ್ರೀ ಶ್ರೀಧರ್ ಪಬ್ಬಿಸೆಟ್ಟಿ, ಚೀಫ್ ಆಪರೇಟಿಂಗ್ ಆಫೀಸರ್, ಸೆಂಟರ್ ಫಾರ್ ಪಬ್ಲಿಕ್ ಪಾಲಿಸಿ, ಐಐಎಂಬಿ
5. ನಿರ್ದೇಶಕರು, ವಿತ್ತೀಯ ನೀತಿ ಸಂಸ್ಥೆ, ಬೆಂಗಳೂರು

**ಹಾಗೂ ಐ.ಟಿ. ಸಮಾಲೋಚಕರನ್ನು ಆಯ್ಕೆ ಮಾಡಲು ಈ ಕೆಳಕಂಡ ಸಮಿತಿ:-**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಡಳಿತ ಸುಧಾರಣೆ)
2. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಸಿಇಜಿ, ಸಿಆಸುಇ (ಇ-ಆಡಳಿತ)
3. ಆಯಕ್ತರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ

4. ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಆಸುಇ (ಸೇವೆಗಳು)
5. ನಿರ್ದೇಶಕರು, ವಿತ್ತೀಯ ನೀತಿ ಸಂಸ್ಥೆ, ಬೆಂಗಳೂರು

ಈ ಮೇಲಿನ ವೆಚ್ಚವನ್ನು 2012-13ನೇ ಸಾಲಿನ ಲೆಕ್ಕಶೀರ್ಷಿಕೆ ಸಂಖ್ಯೆ " 2052-00-090-0-26-051 ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಅನುಷ್ಠಾನ" ದಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 902

**ಕೆ.ಜಿ. ಶಶಿಕಲಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಆಸು-ನಾಗರೀಕ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ವಿಧೇಯಕ 2011ನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 39 ಶಾಸನ 2011, ದಿನಾಂಕ: 02/01/2012.
2. ಅಧಿಸೂಚನೆ ಸಂಖ್ಯೆ: ಸಿಆಸುಇ 04 ಇಕಾಅ 2012, ದಿನಾಂಕ: 14/02/2012.
3. ಅಧಿಸೂಚನೆ ಸಂಖ್ಯೆ: ಸಿಆಸುಇ 28 ಇಕಾಅ 2012, ದಿನಾಂಕ: 27/02/2012.
4. ಅಧಿಸೂಚನೆ ಸಂಖ್ಯೆ: ಸಿಆಸುಇ 04 ಇಕಾಅ 2012, ದಿನಾಂಕ: 01/03/2012.
5. ಆದೇಶ ಸಂಖ್ಯೆ: ಸಿಆಸುಇ 20 ಇಕಾಅ 2012, ದಿನಾಂಕ 06-03-2012.

**ಪ್ರಸ್ತಾವನೆ :**

11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಯನ್ನು ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ವನ್ನು ರಾಜ್ಯ ಶಾಸನ ಸಭೆಯು ಸರ್ವಾನುಮತದಿಂದ ಅಂಗೀಕರಿಸಿತು. ಸಾರ್ವಜನಿಕರಿಗೆ ಸರ್ಕಾರಿ ಅಧಿಕಾರಿಗಳ ಹೊಣೆಗಾರಿಕೆಯನ್ನು ಖಾತರಿಪಡಿಸುವ ಮೂಲಕ ಸುಧಾರಿತ ಸೇವೆಯನ್ನು ನೀಡುವುದು ಈ ಅಧಿನಿಯಮದ ಮುಖ್ಯ ಉದ್ದೇಶವಾಗಿದೆ. ಇದು ಆಡಳಿತದಲ್ಲಿ ಹೆಚ್ಚಿನ ಪಾರದರ್ಶಕತೆ ಹಾಗೂ ದಕ್ಷತೆಯನ್ನು ತರುವುದಲ್ಲದೇ ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಕುಂದುಕೊರತೆ ಹಾಗೂ ಭ್ರಷ್ಟ ಪದ್ದತಿಗಳನ್ನು ಕಡಿಮೆ ಮಾಡುತ್ತದೆ.

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 02/01/2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಮಸೂದೆಯನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಭಾಗ IV-A ಯಲ್ಲಿ ಪ್ರಕಟಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ನಿಯಮಗಳು 2012ನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯ ಭಾಗ IV-A ನಲ್ಲಿ ದಿನಾಂಕ: 01/03/2012 ರಂದು ಪ್ರಕಟಿಸಿ ಜಾರಿಗೊಳಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು ಪೈಲೆಟ್ ಲಾಂಚ್ ಮಾಡಿದ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಾಯಕ ಕಂದಾಯ ಅಧಿಕಾರಿಗಳ ಕಛೇರಿ, ಬೆಂಗಳೂರು ಇವುಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011ನ್ನು ದಿನಾಂಕ: 01/03/2012 ರಿಂದ ಜಾರಿಗೆ ತರಲಾಗಿದೆ.

ಈ ಕಾಯಿದೆಯನ್ನು ಸದ್ಯದಲ್ಲೇ ರಾಜ್ಯಾದ್ಯಂತ ಎಲ್ಲ ಜಿಲ್ಲೆಗಳಲ್ಲಿಯೂ ಜಾರಿ ಮಾಡಲು ಉದ್ದೇಶಿಸಲಾಗಿದೆ.

11 ಇಲಾಖೆಗಳ ವ್ಯಾಪ್ತಿಗೆ ಬರುವ ಸೇವೆಗಳನ್ನು ಕಾಲಮಿತಿಯೊಳಗೆ ರಾಜ್ಯದ ನಾಗರೀಕರಿಗೆ ಸಕಾಲದಲ್ಲಿ ಒದಗಿಸಲು ಜಿಲ್ಲಾ ಮಟ್ಟದಲ್ಲಿ ಎಲ್ಲಾ 11 ಇಲಾಖೆಗಳೊಂದಿಗೆ ಸಮನ್ವಯ, ಉಸ್ತುವಾರಿ ಮತ್ತು ಪರಿಶೀಲನೆಯನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 66 ಇಕಾಅ 2012 ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2012.**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ರ ಅನುಸೂಚಿಯಲ್ಲಿ ವಿವರಿಸಿರುವ 11 ಇಲಾಖೆಗಳ ವ್ಯಾಪ್ತಿಗೆ ಬರುವ ಅಧಿಸೂಚಿತ ಸೇವೆಗಳನ್ನು ಕಾಲಮಿತಿಯೊಳಗೆ ನಾಗರೀಕರಿಗೆ ಒದಗಿಸಲು ಜಿಲ್ಲಾ ಮಟ್ಟದಲ್ಲಿ ಎಲ್ಲಾ 11 ಇಲಾಖೆಗಳೊಂದಿಗೆ ಸಮನ್ವಯ, ಉಸ್ತುವಾರಿ ಮತ್ತು ಪರಿಶೀಲನೆಯನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡಂತೆ ಜಿಲ್ಲಾ ಮಟ್ಟದ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿಯನ್ನು ರಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:

| | | | |
|---|---|---|---|
| 1. | ಜಿಲ್ಲೆಯ ಜಿಲ್ಲಾಧಿಕಾರಿಗಳು | --- | ಅಧ್ಯಕ್ಷರು |
| 2. | ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳು | --- | ಸದಸ್ಯರು |
| 3. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | --- | ಸದಸ್ಯರು |
| 4. | ಜಿಲ್ಲೆಯ ಮುನಿಸಿಪಲ್ ಕಮೀಷನರ್ | --- | ಸದಸ್ಯರು |
| 5. | ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು | --- | ಸದಸ್ಯರು |
| 6. | ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು | --- | ಸದಸ್ಯರು |
| 7. | ಪದವಿಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು | --- | ಸದಸ್ಯರು |
| 8. | ಜಿಲ್ಲಾ ವೈದ್ಯಾಧಿಕಾರಿಗಳು | --- | ಸದಸ್ಯರು |
| 9. | ಎಲ್ಲಾ ಅಸಿಸ್ಟೆಂಟ್ ಕಮೀಷನರುಗಳು | --- | ಸದಸ್ಯರು |
| 10. | ಜಿಲ್ಲೆಯ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಉಪ ನಿರ್ದೇಶಕರು | --- | ಸದಸ್ಯರು |

| | | |
|---|---|---|
| 11. ಜಿಲ್ಲೆಯಲ್ಲಿನ ವಾಣಿಜ್ಯ ತೆರಿಗೆ ಇಲಾಖೆಯ ಉಪ ಆಯುಕ್ತರು | --- | ಸದಸ್ಯರು |
| 12. ಜಿಲ್ಲೆಯ ಸಹಾಯಕ ಕಾರ್ಮಿಕ ಅಧಿಕಾರಿ | --- | ಸದಸ್ಯರು |
| 13. ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರು. | --- | ಸದಸ್ಯರು |
| 14. ಜಿಲ್ಲಾ ವ್ಯವಸ್ಥಾಪಕರು, ರಾಷ್ಟ್ರೀಯ ಮಾಹಿತಿ ಕೇಂದ್ರ | --- | ಸದಸ್ಯರು |
| 15. ಜಿಲ್ಲೆಯ ವಾರ್ತಾ ಮತ್ತು ಪ್ರಚಾರ ಇಲಾಖೆಯ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು | --- | ಸದಸ್ಯರು |
| 16. ಜಿಲ್ಲಾ ಮಟ್ಟದ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು | --- | ಸದಸ್ಯರು |
| 17. ಜಿಲ್ಲೆಯ ಅಪರ ಜಿಲ್ಲಾಧಿಕಾರಿಗಳು | --- | ಸದಸ್ಯ ಕಾರ್ಯದರ್ಶಿ |
| 18. ಜಿಲ್ಲಾ ಎನ್‌ಐಸಿ ಜಿಲ್ಲಾ ಮಾಹಿತಿ ಅಧಿಕಾರಿ (ಡಿಐಒ) | --- | ಸಲಹೆಗಾರರು |

ಸಮಿತಿಯು ಕೆಳಕಂಡ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲನೆ, ಉಸ್ತುವಾರಿ ಮತ್ತು ಮೇಲ್ವಿಚಾರಣೆ ಮಾಡುವುದು.

1) ಒಟ್ಟಾರೆಯಾಗಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಬಗ್ಗೆ ಅಧಿಕಾರಿ/ಸಿಬ್ಬಂದಿ ಮತ್ತು ನಾಗರೀಕರಲ್ಲಿ ಸಮಯಪ್ರಜ್ಞೆ ಮತ್ತು ಒಲವು ಮೂಡಿಸಲು ಪ್ರಯತ್ನಿಸುವುದು
2) ಅಧಿಕೃತ ಅರ್ಜಿ ನಮೂನೆಗಳನ್ನು ಪ್ರಕಟಿಸಿ ಕಛೇರಿಯಲ್ಲಿ ಅಥವಾ ಸಹಾಯ ಕೇಂದ್ರಗಳ ಮೂಲಕ ವಿತರಿಸಲಾಗುತ್ತಿದೆಯೆ ಹಾಗೂ ಯಾವುದೇ ಕಾರಣಕ್ಕೂ ಮಧ್ಯವರ್ತಿಗಳು ಪ್ರವೇಶಿಸಿ ನಾಗರೀಕರಿಗೆ ಶೋಷಣೆ ಮಾಡದಂತೆ ನೋಡಿಕೊಳ್ಳತಕ್ಕದ್ದು.
3) ಸೇವೆಗಳನ್ನು ಸಮಯಬದ್ಧವಾಗಿ ನೀಡುವುದು ಮೇಲಿನ ಹಂತದಿಂದ ಕೆಳಗಿನ ಹಂತದವರೆಗಿನ ಎಲ್ಲಾ ಅಧಿಕಾರಿಗಳ ಜವಾಬ್ದಾರಿಯಾಗಿದ್ದು ಖಚಿತಪಡಿಸಿಕೊಳ್ಳುವುದು.
4) ನಿಗದಿತ ಸಮಯದಲ್ಲಿ ಸೇವೆಗಳನ್ನು ಒದಗಿಸಲು ಕಷ್ಟವೆಂದು ಕಂಡುಬಂದರೆ, ಆ ಸಮಸ್ಯೆಗೆ ಕಾರಣಗಳನ್ನು ಕಂಡುಹಿಡಿದು ಇನ್ನು ಮುಂದೆ ಆ ರೀತಿ ಆಗದಂತೆ ನೋಡಿಕೊಳ್ಳುವುದು.
5) ಪ್ರತಿ ತಿಂಗಳೂ ಯಾವ ಸೇವೆಯಲ್ಲಿ ವಿಳಂಬ/ವಿಫಲತೆ ಆಗಿದ್ದರೆ, ಅದರ ಬಗ್ಗೆ ಪರಿಶೀಲಿಸಿ ಸುಧಾರಣಾ ಕ್ರಮವನ್ನು ತೆಗೆದುಕೊಂಡು, ಈ ಬಗ್ಗೆ ಸಿಆಸುಇ (ಆಸು) ವಿಭಾಗಕ್ಕೆ ವರದಿಯನ್ನು ಸಲ್ಲಿಸುವುದು
6) ಸಕ್ಷಮ ಅಧಿಕಾರಿಗಳಿಗೆ ಪ್ರತ್ಯೇಕ ಲೆಕ್ಕ ಶೀರ್ಷಿಕೆಯೊಂದಿಗೆ ರೂ. 1000/– ಇಂಪ್ರೆಸ್ಟ್ ಮೊತ್ತವನ್ನು ನೀಡಲಾಗುತ್ತಿದೆ. ಇದು ಸಾಲುವುದಿಲ್ಲವೆಂದು ಕಂಡುಬಂದರೆ ಈ ಬಗ್ಗೆ ಸಮರ್ಥನೆಯೊಂದಿಗೆ ಹೆಚ್ಚಿಸಲು ಪ್ರಸ್ತಾವನೆ ಮಂಡಿಸುವುದು.
7) ಸಾರ್ವಜನಿಕರಿಗೆ ಈ ಅಧಿನಿಯಮದಡಿಯಲ್ಲಿ ಸೇವೆಗಳನ್ನು ಪಡೆಯಲು ನಿರಂತರ ತಿಳುವಳಿಕೆ/ಪ್ರಚಾರ ನೀಡುವುದು.
8) ಈ ಅಧಿನಿಯಮದಡಿಯಲ್ಲಿ ಬೇಕಾಗುವ ಹೆಚ್ಚಿನ ಗಣಕಯಂತ್ರಗಳು/ ಪೀಠೋಪಕರಣಗಳನ್ನು ಇಲಾಖೆಗೆ ಒದಗಿಸಿರುವ ಆಯವ್ಯಯ ಅನುದಾನದಿಂದ ಪೂರೈಸಲು ಕ್ರಮವಹಿಸಬೇಕು. ಒಂದು ಪಕ್ಷ ಒದಗಿಸಲು ಸಾಧ್ಯವಾಗದಿದ್ದಲ್ಲಿ ಗಣಕಯಂತ್ರ ಮತ್ತು ಅದರ ಪರಿಕರಗಳ ಬಗ್ಗೆ ಪ್ರಸ್ತಾವನೆಯನ್ನು ಸಿಆಸುಇ (ಇ– ಆಡಳಿತ) ರವರಿಗೆ ಕಳುಹಿಸತಕ್ಕದ್ದು.
9) ಜಿಲ್ಲೆಗೆ ಸಂಬಂಧಿಸಿದಂತೆ ಈ ಅಧಿನಿಯಮದಡಿಯಲ್ಲಿ ಆಗಿರುವ ಪ್ರಗತಿಯ ಮೌಲ್ಯಮಾಪನವನ್ನು ನಡೆಸಿ ಸರಳೀಕರಣ ಮತ್ತು ಗಣಕೀಕರಣ ಯೋಜನೆಯನ್ನು ರೂಪಿಸುವುದು. ರಾಷ್ಟ್ರೀಯ ಮಾಹಿತಿ ಕೇಂದ್ರದವರು ತಯಾರಿಸಿರುವ ಜಿ.ಎಸ್.ಸಿ ತಂತ್ರಾಂಶದ ಸದ್ಬಳಕೆಯನ್ನು ಮಾಡಿಕೊಳ್ಳುವಂತೆ ಮನನ ಮಾಡುವುದು.
10) ಇಲಾಖೆಯಲ್ಲಿ ಖಾಲಿ ಹುದ್ದೆಗಳ ಬಗ್ಗೆ ವಿಮರ್ಶಿಸಿ ಬಾಹ್ಯ ಮೂಲಕ ವಾಹನ ಚಾಲಕರು, ಗಣಕಯಂತ್ರ ಸಹಾಯಕರು ಮತ್ತು ಗ್ರೂಪ್–ಡಿ ನೌಕರರನ್ನು ಒದಗಿಸತಕ್ಕದ್ದು.
11) ಪ್ರತ್ಯೇಕವಾಗಿ ಪ್ರತಿ ಇಲಾಖೆಯ ಕಾರ್ಯಭಾರವನ್ನು ವಿಶ್ಲೇಷಿಸಿ, ಅಧಿಕ ಹುದ್ದೆಗಳ ಬಗ್ಗೆ ವಿವರಗಳನ್ನು ಸಕಾರಣಗಳೊಂದಿಗೆ ವರದಿಯನ್ನು ಸಂಬಂಧಿತ ಇಲಾಖಾ ಕಾರ್ಯದರ್ಶಿಯವರಿಗೆ ಕಳುಹಿಸುವುದು. ಅದಕ್ಕೂ ಮುಂಚೆ ಇಲಾಖೆಯೊಳಗೆ ರೀಡಿಪ್ಲಾಯಮೆಂಟ್ ಮೂಲಕ ಭರ್ತಿ ಮಾಡುವ ಬಗ್ಗೆ ಪರಿಶೀಲಿಸುವುದು.
12) ಈ ಅಧಿನಿಯಮದ ಸಂಬಂಧ ಸ್ಥಾಪಿಸಲಾಗಿರುವ ಕರೆ ಕೇಂದ್ರಗಳಲ್ಲಿ ಸ್ವೀಕೃತವಾಗಬಹುದಾದಂತಹ ನಾಗರೀಕರ ಪ್ರಶ್ನೆ, ಅವರ ಅರ್ಜಿಗಳ ಮೇಲ್ವಿಚಾರಣೆ ಬಗ್ಗೆ ಹಾಗೂ ಕರೆಕೇಂದ್ರದ ಸಿಬ್ಬಂದಿಗಳ ಕೋರಿಕೆಯ ಬಗ್ಗೆ ಜಿಲ್ಲೆಯಲ್ಲಿನ ನೋಡಲ್ ಅಧಿಕಾರಿಗಳು ಕೂಡಲೇ ಸ್ಪಂದಿಸಿ ಸರಿಯಾದ ಮಾರ್ಗದರ್ಶನ/ಮಾಹಿತಿ ನೀಡುವಂತೆ ನೋಡಿಕೊಳ್ಳತಕ್ಕದ್ದು. ಕರೆಕೇಂದ್ರದ ದೂರವಾಣಿ ಸಂಖ್ಯೆ: 44554455 ವೆಬ್ ವಿಳಾಸ : Kgsc@nic.in
13) ಆಗಿಂದ್ದಾಗ್ಗೆ ಸೇವಾ ಕೇಂದ್ರಗಳಿಂದ ಮಾಹಿತಿ ಪಡೆದು ಉದ್ಭವಿಸಬಹುದಾದ ಸಮಸ್ಯೆಗಳ ಬಗ್ಗೆ ಚರ್ಚಿಸಿ ಪರಿಹಾರ ನೀಡುವುದು.

ಸಮಿತಿಯು ಸ್ಥಳೀಯ ಅವಶ್ಯಕತೆಗನುಗುಣವಾಗಿ ಇನ್ನಾವುದೇ ಅಧಿಕಾರಿಗಳನ್ನು ಸಮಿತಿಗೆ ಸೇರ್ಪಡೆ ಮಾಡಿಕೊಳ್ಳಬಹುದು. ಹಾಗೂ ಪ್ರತಿ ಹದಿನೈದು ದಿನಗಳಿಗೊಮ್ಮೆ ಅಥವಾ ಅವಶ್ಯಕತೆಗನುಗಣವಾಗಿ ಸಭೆ ಸೇರಿ ಅಧಿನಿಯಮದ ಉಸ್ತುವಾರಿ ಮತ್ತು ಪರಿಶೀಲನೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 903

**ಕೆ.ಜಿ. ಶಶಿಕಲಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಆಸು–ನಾಗರೀಕ ಸೇವೆಗಳು)